# ಶೂದ್ರ

**ಈ ಸಂಚಿಕೆಯಲ್ಲಿ :**

ಸುರೇಂದ್ರ ಮೋಹನ್ — ಶಶಿಕಲಾ ವಸ್ತ್ರದ — ಕಾಳೇಗೌಡ ನಾಗವಾರ — ಕೆ. ಎಸ್. ಶಶಿಪ್ರಭಾ
ಧರಣೇಂದ್ರ ಕುರಕುರಿ — ಕೆ. ಎಂ. ಮುನಿಕೃಷ್ಣಪ್ಪ — ಪುರುಷೋತ್ತಮ — ವೈ. ಸಿ. ಪಾಟೀಲ್
ಡಿ. ಆರ್. ನಾಗರಾಜ್ — ಹಸನ್ ನಹೀಮ ಸುರಕೋಡ್ — ಬೆಳಕಿನ ರಾಮಮೂರ್ತಿ
ಕಮಲೇಶರ ಅಲೆದಾಟ — ಬೀದಿ ಮಾತು — ಒಳನೋಟ.

ಬೆಲೆ : 1-25



ಗೆಜ್ಜೆಯು ನಾದವಷ್ಟೇ ಚಿತ್ರಕಲೆ ಧ್ವನಿಪೂರ್ಣವಾದದ್ದು

ಕಲಾವಿದ ತಡಪದ್‌ರವರ ವಿಚಾರಗಳು:—ಕೆ. ವಿ. ನಾರಾಯಣ್

ಹೊಸ ಬದುಕಿನತ್ತ ಶೂದ್ರ ತಿಂಗಳ ಪತ್ರಿಕೆ

ಸಂಪುಟ : 6 ಜುಲೈ 1981 ಸಂಚಿಕೆ : 9

ಸಹಾಯಕ ಸಂಪಾದಕರು : ಪದ್ಮರಾಜ ದಂಡಾವತಿ, ನಿರ್ಮಲ ಎಸ್. ರೆಡ್ಡಿ, ಪುರುಷೋತ್ತಮ ಎ., ಶಶಿಕಲಾ ವಸ್ತ್ರದ,

ಮುಖಚಿತ್ರದ ಫೋಟೋ ಕರ್ಟಸಿ : ಆರ್. ಶ್ರೀನಿವಾಸ್

ಶೂದ್ರಕ್ಕೆ ಚಂದಾದಾರರಾಗಿ. ನಿಮ್ಮ ಚಂದಾ ಇನ್ನೂ ಬಂದಿಲ್ಲ. ನೀವು ಕಳಿಸುವ ಚಂದಾದಿಂದ ಶೂದ್ರ ಬೆಳೆಯಬೇಕಾಗಿದೆ. ಸುಮಾರು 600 ಮಂದಿ ರಿನ್ಯೂ ಮಾಡಿಸಬೇಕಾಗಿದೆ. ಶೂದ್ರ ಬರದಿದ್ದರೆ ಪತ್ರ ಬರೆಯಿರಿ. ಚಂದಾ ಕಳಿಸದೆ ಶೂದ್ರ ತರಿಸಿಕೊಳ್ಳಬೇಡಿ. ಚಂದಾ ಕಳಿಸಿದ ಮೇಲೆ ನಮ್ಮ ದಾಖಲೆಗೆ ವಿಳಾಸ ಬರೆಯಿರಿ. ಸಾಧ್ಯವಾದರೆ ಪತ್ರ ಬರೆಯಿರಿ.

ಶೂದ್ರಕ್ಕೆ ಅಜೀವ ಸದಸ್ಯರಾಗಿ. 200 ರೂ. ಗಳನ್ನು ಐದು ಕಂತುಗಳಲ್ಲಿ ಕೊಡಬಹುದು. ಕೆಲವು ಗೆಳೆಯರು 250 ಜಾಸ್ತಿ ಅಂದಿದ್ದಕ್ಕೆ 200 ರೂ. ಮಾಡಲಾಯಿತು.

ವಾರ್ಷಿಕ ಚಂದಾ : 15 ರೂ.

ಶೂದ್ರ ಶ್ರೀನಿವಾಸ್, ಸುದ್ದುಗುಂಟೇ ಪಾಳ್ಯ. ಡಿ. ಆರ್. ಕಾಲೇಜ್ ಅಂಚೆ.
ಬೆಂಗಳೂರು—560 029

# ಫ್ರಾನ್ಸಿನ ಅಧ್ಯಕ್ಷರಾಗಿ ಮಿತ್ತೆರಾಂ

—ಸುರೇಂದ್ರ ಮೋಹನ್

ಯುರೋಪಿನ ಸಮಾಜವಾದವು ತಡವಾಗಿಯಾದರೂ ಅನಿರೀಕ್ಷಿತವಾಗಿ ಪುನಃ ಚೇತರಿಸಿಕೊಳ್ಳುವ ಸಾಮರ್ಥ್ಯವನ್ನು ತೋರಿಸಿದೆ. ಸಮಾಜವಾದದ ಸುಭದ್ರ ಕೋಟೆಗಳಲ್ಲಿ ಒಂದೆನಿಸಿದ್ದ ಪಶ್ಚಿಮ ಬರ್ಲಿನ್ನಿನಿಂದ ಅದು ಉಚ್ಚಾಟನೆಗೊಂಡಿದ್ದರೂ ಸಹ ಪುರಸಭೆಯ ಚುನಾವಣೆಗಳಲ್ಲಿ ಬ್ರಿಟಿಷ್ ಲೇಬರ್ ಪಕ್ಷವು ಗಮನಾರ್ಹವಾದ ಯಶಸ್ಸನ್ನು ಪಡೆದಿದೆ. ಈ ಎರಡೂ ಗಮನಾರ್ಹ ಫಲಿತಾಂಶಗಳು. ಇವು ತಮ್ಮ ತಮ ರಾಷ್ಟ್ರಗಳಲ್ಲಿನ ಸರಕಾರಗಳಲ್ಲಿ ಆಗಬಹುದಾದ ಬದಲಾವಣೆಗಳ ಮುನ್ಸೂಚನೆಗಳು ಎನ್ನುವುದು ನಿಜ. ಆದರೆ ಇವೆರಡರಲ್ಲಿ ಯಾವ ಬದಲಾವಣೆಯೂ, ಅದು ಹಾಗೆ ಸಂಭವಿಸಿದಾಗ ಫ್ರಾನ್ಸಿನ ಮಿತ್ತೆರಾಂ ಅವರ ಭಾರಿ ವಿಜಯದಂತೆ ಪಶ್ಚಿಮ ಯುರೋಪಿನ ಇತಿಹಾಸದ ಮೇಲೆ ಪರಿಣಾಮಕಾರಿಯಾದ ಛಾಯೆಯನ್ನು ಬೀರಲಾರದು.

ಮಿತ್ತೆರಾಂ ಅವರ ವಿಜಯವು ಸಮಾಜವಾದದ ಬಗೆಗಿದ್ದ ಅವರ ದೃಢನಿಷ್ಠೆಗೆ ಹೋರಾಟ ಮನೋಭಾವಕ್ಕೆ ಹಾಗೂ ವರ್ಣರಂಜಿತ ವೈಯಕ್ತಿಕ ಸಾಮರ್ಥ್ಯಗಳಿಗೆ, ತಂದ ಗೌರವವಾಗಿದೆ. ಅದಕ್ಕಿಂತ ಮಿಗಿಲಾಗಿ, ಅವರ ವಿಜಯವು ದಗಾಲೆವಾದ, ಗಿಸ್ಕಾರರ ಹೊಸ ದಗಾಲೆವಾದ ಹಾಗೂ ಅವರ ಬೇರುಬಿಟ್ಟಿರುವ ಸಂಪ್ರದಾಯಿಕತೆಯ ನಿರಾಕರಣೆಯೇ ಆಗಿದೆ. ಅದು, ಜನತಾಂತ್ರಿಕ ವಿಧಾನಗಳ ಮೂಲಕ ಪ್ರಗತಿಪರ ಸುಧಾರಣೆಗಳಿಗಾಗಿ ಫ್ರಾನ್ಸಿನ ಯುವಜನತೆ ನೀಡಿದ ಮಾನ್ಯತೆಯೇ ಆಗಿದೆ. ಸಮಾಜವಾದಗಳಿಗೆ ಹಾಗೂ ವಿಶೇಷವಾಗಿ ಜ್ಯಾಕೀ ಮತ್ತು ಲಿಯೋಂ ಬ್ಲೂಂ ಅವರಿಂದ ನಿರ್ಮಿತ ಮಹತ್ತರವಾದ ಎಸ್.ಎಫ್.ಐ.ಓ ನಿಧಾನವಾಗಿ ಜಡಗೊಳ್ಳುತ್ತ ಹೋದುದರ ಕಹಿಯನ್ನು ಅನುಭವಿಸಿದ ಸಮಾಜವಾದಿಗಳಿಗೆ, ಎರಡನೆಯ ಮಹಾಯುದ್ಧದ ನಂತರ ಅದು ನಿಷ್ಠೆಯ ಪುನರ್-ದೃಢೀಕರಣದ ಒಂದು ಸ್ಮಾರಕವೇ ಆಗಿದೆ. ಸಮಾಜವಾದಿ ಪಕ್ಷವು ಐದರ ದಶಕದಲ್ಲಿ ಹಾಗೂ ಆರರ ದಶಕದ ಪ್ರಾರಂಭದಲ್ಲಿ ಶೇಕಡಾ 15 ಕ್ಕಿಂತ ಕಡಿಮೆ ಮತಗಳನ್ನು ಪಡೆದ ಒಂದು ಪಕ್ಷವಾಗಿತ್ತು. ಅದು ಪ್ರಗತಿಪರ ಜನತಂತ್ರದ ಎಲ್ಲ ಪ್ರಮುಖ ಅಂಶಗಳನ್ನು ತನ್ನ ತೆಕ್ಕೆಗೆ ಸೆಳೆದು ಕೊಳ್ಳುವಲ್ಲಿ ವಿಫಲವಾಗಿತ್ತು. ಅದು ಇಂಡೋ-ಚೀನಾದ ಸಂಬಂಧದಲ್ಲಿಯೇ ಆಗಲಿ ಅಥವಾ ಆಲ್ಜೀರಿಯಾ ಸಂಬಂಧದಲ್ಲಿಯೇ

---

ಸಮಾಜವಾದಿ ಅಧ್ಯಯನ ಕೇಂದ್ರದಿಂದ ಪ್ರಕಟಿತ

ಆಗಲಿ ವಸಾಹುತಶಾಹಿ-ವಿರೋಧದ ನಿಲುವನ್ನು ತ್ಯಜಿಸಿತ್ತೆಂದು ನಂಬಲಾಗಿತ್ತು. ಆದರೆ 1964ರಲ್ಲಿ ಫ್ರಾಂಸ್ವಾ ಮಿತ್ತೆರಾಂ ಅದರ ನಾಯಕರಾದರು. ಇದಕ್ಕೆ ಕಾರಣ ಪಕ್ಷವನ್ನು ವಿಸ್ತೃತಗೊಳಿಸಲು ಹಾಗೂ ಜನತಾಂತ್ರಿಕ ಪ್ರಗತಿಪರ ಶಕ್ತಿಗಳ ಒಗ್ಗಟ್ಟಿಗಾಗಿ ಅವರು ಆಂದೋಲನವನ್ನು ನಡೆಸಿದ್ದರು.

1965ರ ನಂತರ ಫ್ರಾನ್ಸಿನ ಸಮಾಜವಾದಿ ಪಕ್ಷವು ಸಂಪೂರ್ಣವಾಗಿ ಮಿತ್ತೆರಾಂ ಅವರ ನಾಯಕತ್ವದಲ್ಲಿ ಹೋಯಿತು. ಶೀತಲಯುದ್ಧದ ಅವಧಿಯಲ್ಲಿ ಬೆಳಸಿಕೊಂಡಿದ್ದ ತೀವ್ರ ಕಮ್ಯುನಿಸ್ಟ್ ವಿರೋಧಿ ನೀತಿಯ ವಜ್ರಕವಚವನ್ನು ಭೇದಿಸಿಕೊಂಡು ಪಕ್ಷವು ಹೊರ ಬಂದಿತು. ಒಂದು ಹೊಸ ತರಲತೆಯನ್ನು ಪಡೆಯಿತು. ತನ್ನ ಧೋರಣೆಗಳನ್ನು ಪುನರ್ ಪರಿಶೀಲಿಸಿತು. ಅದು ಫ್ರಾನ್ಸಿನ ಕಮ್ಯುನಿಸ್ಟ್ ಪಕ್ಷದ ಜತೆ ಸೇರಲು ಅಥವಾ ಆಗಾಗ ಫ್ರಾನ್ಸಿನ ಕಮ್ಯುನಿಸ್ಟ್ ಪಕ್ಷ ಸ್ಟಾಲಿನ್‌ವಾದದ ಅಥವಾ ಮಾಸ್ಕೋದ ಜೊತೆಗೆ ನಡೆದಿರುವ ಸರಸ-ವಿರಸಗಳನ್ನು ಎದುರಿಸಲು ಅದು ಹಿಂದೆಗೆಯಲಿಲ್ಲ. ಆದರೆ ಫ್ರಾನ್ಸಿನ ನಾಲ್ಕನೆಯ ಗಣರಾಜ್ಯವು, 'ನಾನೇ ಫ್ರಾನ್ಸ್' ಎಂದು ಕೊಚ್ಚಿಕೊಳ್ಳುತ್ತಿದ್ದ ಅಧ್ಯಕ್ಷ ದಗಾಲ್‌ನ ಅಚ್ಚನ್ನು ಹೊತ್ತುಕೊಂಡಿದ್ದ ಸಮಯದಲ್ಲಿ ಸ್ವಾಯತ್ತತೆ, ಸ್ವಯಂ ಆಡಳಿತ ಹಾಗೂ ಬಹುತ್ವವಾದಗಳ ಆವಶ್ಯಕತೆಗಳ ಬಗ್ಗೆ ಸಮಾಜವಾದಿ ಪಕ್ಷ ಹಾಗೂ ಫ್ರಾನ್ಸಿನ ಎಡಪಂಥೀಯರು ಸ್ಪಂದಿಸುವಂತೆ ಮಾಡಿದ್ದೇ ಮಿತ್ತೆರಾಂ ಅವರ ಮಹತ್ತರವಾದ ಕೊಡುಗೆ. ಸಂಯುಕ್ತರಾಜ್ಯದ ಪರಿಕಲ್ಪನೆ ಬಲಿಷ್ಠವಾಗುತ್ತಿದ್ದ ಹಾಗೂ ಕೇಂದ್ರವಾದವನ್ನೇ ಬೋಧಿಸುವ ಫ್ರಾನ್ಸಿನ ಕಮ್ಯುನಿಸ್ಟ್ ಪಕ್ಷವೇ ಸಮಭಾರವಾಗಿದ್ದ ಕಾಲವದು. ಸಮಾಜವಾದಿ ಪಕ್ಷವು ಬುದ್ಧಿಜೀವಿಗಳ ಗೌರವವನ್ನು ಹಾಗೂ ಯುವ ಜನತೆಯ ಪ್ರಶಂಸೆಯನ್ನೂ ಗಳಿಸಿತು. ಪಕ್ಷವು 1965 ಮತ್ತು 1981ರ ನಡುವಿನ ಅವಧಿಯಲ್ಲಿ ಗಳಿಸಿದ ಮತ ಎರಡರಷ್ಟು ಹೆಚ್ಚಾಯಿತು. ಅದರ ಪರಿಣಾಮವಾಗಿ ಪಶ್ಚಿಮ ದೇಶಗಳಲ್ಲಿ ಅತ್ಯಂತ ದೊಡ್ಡ ದೇಶವಾದ ಫ್ರಾನ್ಸಿನಲ್ಲಿ ಸಮಾಜವಾದಿಗಳು ಇಂದು ಅಧಿಕಾರಕ್ಕೆ ಬಂದಿದ್ದಾರೆ.

ಎರಡನೆಯ ವಿಶ್ವಯುದ್ಧದ ನಂತರ ಸಮಾಜವಾದಿಗಳು ಕಮ್ಯುನಿಸ್ಟರಿಗೆ ಮೊದಲನೆಯ ಸ್ಥಾನ ನೀಡಿದ ದಕ್ಷಿಣ ಯೂರೋಪಿನಲ್ಲಿ 1975-79ರಲ್ಲಿ ಪೋರ್ಚುಗಲ್‌ನಲ್ಲಿ ಮೇರಿಯೋ ಸೋರೆಸ್ ಅವರ ಮಹತ್ತರವಾದ ವಿಜಯಕ್ಕಿಂತ ಮಿತ್ತೆರಾಂ ಅವರ ಅವರ ವಿಜಯವು ಇನ್ನೂ ಮಹತ್ವದ ಪ್ರಗತಿಯನ್ನು ಮುನ್ಸೂಚಿಸುತ್ತದೆ. ಸಾಕಷ್ಟು ತಂತ್ರದ ನೈಪುಣ್ಯವನ್ನು ತೋರಿಸುತ್ತಿರುವ ಸ್ಪೇನ್ ದೇಶದ ಸಮಾಜವಾದಿಗಳು ಹಾಗೂ ಸಮರ್ಥ ಮತ್ತು ಮುತ್ಸದ್ದಿಯಾದ ಕ್ರಾಕ್ಸಿ ಅವರ ನೇತೃತ್ವದಲ್ಲಿನ ಇಟಲಿಯ ಸಮಾಜ

ವಾದಿಗಳು ಮಿತ್ತೆರಾಂ ಅವರ ವಿಜಯದಿಂದ ಮತ್ತಷ್ಟು ಉತ್ಸಾಹಿಗಳಾಗಿದ್ದಾರೆ. ಈ ಎಲ್ಲ ಪಕ್ಷಗಳು ಸಾಮಾಜಿಕ ಜನತಂತ್ರದ ಹಳೆಯ ಪರಂಪರೆಗಳನ್ನೂ ಎರಡನೆಯ ಅಂತರ್-ರಾಷ್ಟ್ರೀಯದ ಪಕ್ಷಗಳ ನಿಷೇಧಗಳನ್ನು ಶೀತಲಯುದ್ಧದ ಸಮಯದ ಪೂರ್ವಗ್ರಹಿಕೆಗಳನ್ನೂ ತ್ಯಜಿಸಿ ಹೊರಬಂದಿದೆ. ಈ ಎಲ್ಲ ಪಕ್ಷಗಳು ಹಳೆಯ 'ಅಟ್ಲಾಂಟಿಕ್' ಬಣದ ಪಕ್ಷಗಳಾಗಿ ಉಳಿದಿಲ್ಲ. ಅವುಗಳು ತಮ್ಮ ಪ್ರಗತಿ ಶೀಲತೆಯನ್ನು ಇನ್ನೂ ಉಳಿಸಿಕೊಂಡಿವೆ. ಈಗ, ಅವುಗಳಲ್ಲಿ ಅತಿ ದೊಡ್ಡ ಪಕ್ಷವು ಈ ವಲಯದಲ್ಲಿಯೇ ಅತಿ ಮುಖ್ಯವಾದ ರಾಷ್ಟ್ರದಲ್ಲಿ ಅಧಿಕಾರಕ್ಕೆ ಬಂದಿದೆ. ಮೂರನೆಯ ದಶಕದಿಂದ ನಾರ್ವೆ, ಸ್ವೀಡನ್ನು, ಡೆನ್ಮಾರ್ಕ್ ದೇಶಗಳಿಂದ ಕೂಡಿದ ಉತ್ತರ ಯೂರೋಪಿನಲ್ಲಿ ಸಮಾಜವಾದಿಗಳು ಏನನ್ನು ಮಾಡಿದ್ದರೋ ಅದನ್ನೇ ಈಗ ದಕ್ಷಿಣ ಯೂರೋಪಿನಲ್ಲಿ ಇದು ಮಾಡಲು ಸಾಧ್ಯವಿದೆ. ಹಾಲೆಂಡ್ ಮತ್ತು ಬೆಲ್ಜಿಯಂ ದೇಶಗಳಲ್ಲಿ ಇತರ ಪಕ್ಷಗಳ ಸಹಕಾರದೊಂದಿಗೆ ಸಮಾಜವಾದಿಗಳು ಸಂಮಿಶ್ರ ಸರಕಾರಗಳನ್ನು ನಡೆಸುತ್ತಿರುವಾಗ, ಆಸ್ಟ್ರಿಯದಲ್ಲಿ ಸುಭದ್ರ ಸರಕಾರವನ್ನು ನಡೆಸುತ್ತಿರುವಾಗ ಮತ್ತು ಬ್ರಿಟನ್ನಿನಲ್ಲಿ ಅಧಿಕಾರ ಪಡೆಯುವ ನಿರೀಕ್ಷೆಯಲ್ಲಿರುವಾಗ ಸಮಾಜವಾದಿ ನಾಯಕತ್ವದ ದಕ್ಷಿಣ ಯೂರೋಪು, ಯೂರೋಪಿನ ಒಂದು ಹೊಸ ಪುನರುತ್ಥಾನವನ್ನು, ಒಂದು ಹೊಸ ಸುಧಾರಣೆಯನ್ನು ಪ್ರಾರಂಭಿಸಬಹುದು.

ಇವುಗಳು ಕೇವಲ–ಬಹು ದೂರವಿರುವ-ಸಾಧ್ಯತೆಗಳಾಗಿವೆ. ಏಕೆಂದರೆ, ಮಿತ್ತೆರಾಂ ಅವರು ಸವಾಲುಗಳನ್ನು ಬಯಸಿದರೂ ಸಹ ಬಹು ಗಂಭೀರವಾದ ಸವಾಲನ್ನು ಎದುರಿಸಬೇಕಾಗಿದೆ. ರಾಷ್ಟ್ರೀಯ ಸಭೆಯಲ್ಲಿ ಸಂಪ್ರದಾಯ ವಾದಿಗಳೇ ಬಹುಮತದಲ್ಲಿದ್ದಾರೆ. ಮಿತ್ತೆರಾಂ ಅವರು ಸಂಪೂರ್ಣ ಚಿತ್ರವನ್ನೇ ಬದಲಿಸಲು ಜೂನ್ 28 ರಂದು ಚುನಾವಣೆಗಳನ್ನು ನಡೆಸುವ ಸನ್ನಾಹದಲ್ಲಿದ್ದಾರೆ. ಅವರು ಪಡೆದ ಬಹುಮತದ ಶೇಕಡಾ 51.7 ರಷ್ಟು ಮತಗಳಲ್ಲಿ ಶೇಕಡಾ 18ರಿಂದ 20 ಕ್ಕಿಂತ ಕಡಿಮೆ ಇಲ್ಲದಷ್ಟು ಮತಗಳನ್ನು ಪಡೆದಿರುವ ಕಮ್ಯುನಿಸ್ಟರ ಸಹಕಾರವಿಲ್ಲದೆ ಇದನ್ನು ನೆರವೇರಿಸಲು ಸಾಧ್ಯವಿಲ್ಲ. ಈ ಬಗ್ಗೆ ಸಹಕಾರವನ್ನು ಕೇಳಿದ ಮಾತ್ರಕ್ಕೆ ಕಮ್ಯುನಿಸ್ಟರು ಕೊಟ್ಟು ಬಿಡುವುದಿಲ್ಲ ಎಂದು ಫ್ರಾನ್ಸಿನ ಕಮ್ಯುನಿಸ್ಟ್ ಪಕ್ಷದ ಪ್ರಧಾನ ಕಾರ್ಯದರ್ಶಿ ಜಾರ್ಜ್ ಮಾರ್ಷೆ ಅವರು ಸ್ಪಷ್ಟಪಡಿಸಿದ್ದಾರೆ. ಆಡಳಿತದಲ್ಲಿ ಪಾಲು ಅಥವಾ ಕಾರ್ಯಕ್ರಮ ಆಧಾರಿತ ಸಾಮಾನ್ಯ ವೇದಿಕೆ ಎಂಬಂಥ ಒತ್ತಾಯಗಳ ಬಗ್ಗೆ ಏನು ಮಾಡುವರು ? ಮಿತ್ತೆರಾಂ ಅವರು ಕಷ್ಟಪಟ್ಟು ಪಡೆದ ಮಧ್ಯಮ ವರ್ಗಗಳು ಇದಕ್ಕೆ ಹೇಗೆ ಪ್ರತಿಕ್ರಿಯೆ ತೋರಿಸುತ್ತವೆ ?

ಫ್ರಾನ್ಸಿನ ಕಮ್ಯುನಿಸ್ಟ್ ಪಕ್ಷವು ಒಂದು ಅತ್ಯಂತ ಶಿಸ್ತು ಬದ್ಧ, ಕಾರ್ಯಕರ್ತರನ್ನು ಆಧರಿಸಿದ ಕೇಂದ್ರೀಕೃತ ಪಕ್ಷವಾಗಿದೆ ಹಾಗೂ ಮಾರ್ಷೆ ಅವರು ಅದರ ಹುಲಿಯಾಗಿದ್ದಾರೆ. 1970ರಲ್ಲಿ ಪಕ್ಷವು ಭಿನ್ನಾಭಿಪ್ರಾಯಕ್ಕೆ ಅವಕಾಶ ಮಾಡಿಕೊಟ್ಟಿದ್ದೇನೊ ನಿಜ. ಆದರೆ ನಂತರ ಮಹಾ ಬುದ್ಧಿಜೀವಿ ಪಾಲ್ ಗೋರಾಡ್ ಅವರನ್ನು ಭೇಟಿ ಮಾಡಿದ್ದು ಅಷ್ಟೇ ನಿಜ. 1975-76ರಲ್ಲಿ ಅದು ಬರ್ಲಿಂಗರ್ ನಾಯಕತ್ವದ ಇಟಲಿಯ ಕಮ್ಯುನಿಸ್ಟ್ ಪಕ್ಷದ ಜತೆ ಸೇರಿ ಬಹು ಪಕ್ಷಗಳ ವ್ಯವಸ್ಥೆಯಲ್ಲಿ ತನಗೆ ನಿಷ್ಠೆ ಇದೆ ಎಂದೂ ಕಾರ್ಮಿಕರ 'ಸರ್ವಾಧಿಕಾರ' ಎಂಬ ತತ್ವವನ್ನು ತಾನು ನಿರಾಕರಿಸಿರುವುದಾಗಿಯೂ ಘೋಷಿಸಿತು. ಈ ರೀತಿ ಅದು ಯುರೋ ಕಮ್ಯುನಿಜಂ ಎಂದು ಕರೆಯಲಾಗುವ ಸಂಗತಿಯ ನಿರ್ಮಾಪಕರಲ್ಲೊಂದಾಗಿತ್ತು. ಏನೇ ಆಗಲಿ, ಇಟಲಿಯ ಕಮ್ಯುನಿಸ್ಟ್ ಪಕ್ಷದಂತಲ್ಲದೆ, ಫ್ರಾನ್ಸಿನ ಕಮ್ಯುನಿಸ್ಟ್ ಪಕ್ಷವು ಬಹಳ ಬೇಗನೇ ರಷ್ಯದ ಕಮ್ಯುನಿಸ್ಟ್ ನಾಯಕತ್ವದೊಂದಿಗೆ ರಾಜಿ ಮಾಡಿಕೊಂಡಿತು ಹಾಗೂ ಹಳೆಯ ಚಾಳಿಗಳನ್ನೇ ಮತ್ತೆ ಮೈಗೂಡಿಸಿಕೊಂಡಿತು. ಸಮಾಜವಾದಿಗಳೊಂದಿಗೆ ಅದರ ಸಂಬಂಧವು ಇನ್ನೂ ಒಗಟಾಗಿಯೇ ಉಳಿದಿದೆ. ಸಮಾಜವಾದಿಗಳೊಂದಿಗೆ ಮಾಡಿಕೊಂಡಿದ್ದ ತನ್ನ 1974ರ ಮೈತ್ರಿಯನ್ನು ಮುರಿಯುವಂತೆ ರಶಿಯಾ ಅದಕ್ಕೆ ಆಜ್ಞಾಪಿಸಿದಾಗ ಅದನ್ನು ಮುರಿಯಲು ಅದು ಹಿಂದು-ಮುಂದು ನೋಡಲೇ ಇಲ್ಲ. ಅದಕ್ಕಿಂತ ಮಿಗಿಲಾಗಿ, ಅದು ಎರಡು ದಶಕಗಳ ಹಿಂದೆ ಅದು ಪಡೆದಿದ್ದ ಮತಗಳಲ್ಲಿ ಅರ್ಧದಷ್ಟನ್ನು ಮಾತ್ರ ಪಡೆಯುವಂತೆ ಮಾಡಿ ಅದನ್ನು ಹಿಂದಕ್ಕೆ ತಳ್ಳಿದ ಸರಳ ಕಾರಣಕ್ಕಾಗಿ ಮಿತ್ತೆರಾಂ ಅವರನ್ನು ಕಂಡರೆ ಅದಕ್ಕೆ ಅಸೂಯೆ.

ಜನರಲ್ ಫ್ರಾಂಕೊ ನಷ್ಟ ಪಡಿಸಿದ ಮೂರನೆಯ ದಶಕದ ಸ್ಪೇನಿನ ಗಣರಾಜ್ಯದ ಕಾಲದಿಂದಲೂ ಫ್ರಾನ್ಸಿನ ಕಮ್ಯುನಿಸ್ಟ್ ಪಕ್ಷ ಜನತಾ ರಂಗದ ಶೈಲಿ ಮತ್ತು ತಂತ್ರಗಳಲ್ಲಿಯೇ ನುರಿತಿದೆ. ಗಣರಾಜ್ಯದಲ್ಲಿ ಪಾಲುದಾರರಾಗಿದ್ದ ಸ್ಪೇನಿನ ಕಮ್ಯುನಿಸ್ಟರು ಆ ಸಮಯದಲ್ಲಿ ಗಣರಾಜ್ಯವನ್ನು ರಕ್ಷಿಸುವುದಕ್ಕಿಂತ ತಮ್ಮ ಸಹೋದರರಾದ ಟ್ರಾಟ್‌ಸ್ಕಿ ಅನುಯಾಯಿಗಳನ್ನು ಮಣ್ಣುಪಾಲು ಮಾಡುವುದರಲ್ಲಿಯೇ ಹೆಚ್ಚು ಆಸಕ್ತರಾಗಿದ್ದರು. ಇವರಿಗೆ ಫ್ರಾನ್ಸಿನ ಕಮ್ಯುನಿಸ್ಟರೇ ಗುರುಗಳಾಗಿದ್ದರು. ಫ್ರಾನ್ಸಿನಲ್ಲಿಯೂ ಸಹ 1936ರಲ್ಲಿ ಜನತಾ ರಂಗದ ಟಿಕೇಟಿನ ಮೇಲೆ ವಿಜಯವನ್ನು ಸಾಧಿಸಿದ ಲಿಯೋಂ ಬ್ಲೂಂ ಅವರಿಗೆ ಕೂಡ ಫ್ರಾನ್ಸಿನ ಕಮ್ಯುನಿಸ್ಟ್ ಪಕ್ಷವು ಸಹಾಯ ಮಾಡಲೇ ಇಲ್ಲ. ಆದರೆ ಇತರೆ ಸಂದರ್ಭಗಳಲ್ಲಿ ಅವರು ಕಮ್ಯುನಿಸ್ಟ್ ಇಂಟರ್ ನ್ಯಾಷನಲ್ ನಿಲುವುಗಳನ್ನು ಬಹಳ ನಿಷ್ಠೆಯಿಂದ ಜಾರಿಗೆ ತಂದರು. ಏನೇ ಆದರೂ ಅವರು ಸ್ವತಂತ್ರವಾದ

ನಿರ್ಧಾರಗಳನ್ನು ಕೈಗೊಳ್ಳುವ ಪಾಠವನ್ನು ಇಟಲಿಯ ಮತ್ತು ಸ್ಪೇನಿನ ಕಮ್ಯುನಿಸ್ಟರಿಂದ ಕಲಿಯುವ ಸಾಧ್ಯತೆ ಇನ್ನೂ ಇದೆ. ಜತೆಗೆ ಫ್ರಾನ್ಸಿನ ಪ್ರಗತಿಪರ ಜನಾಭಿಪ್ರಾಯದ ಒತ್ತಡವು ಹೆಚ್ಚು ಹೊಂದಾಣಿಕೆಯ ಹಾಗೂ ಹೆಚ್ಚು ತರ್ಕಬದ್ಧವಾದ ಆಲೋಚನಾ ಕ್ರಮವನ್ನು ಅವರು ಅನುಸರಿಸುವಂತೆ ಮಾಡಬಹುದು. ಅಥವಾ ಚಾನ್ಸಲರ್ ಹೆಲ್ಮುಟ್ ಸ್ಮಿಡ್ಟ್ ನಾಯಕತ್ವದ ಪಶ್ಚಿಮ ಜರ್ಮನಿಯ ಜನತಾಂತ್ರಿಕ ಸಮಾಜವಾದಿಗಳ ಹಾಗೂ ಮಿತ್ತೆರಾಂ ನಾಯಕತ್ವದ ಫ್ರಾನ್ಸಿನ ನಡುವಿರುವ ವಿದೇಶ ಧೋರಣೆಗಳ ಬಗೆಗಿನ ಚಿರಪರಿಚಿತ ಭಿನ್ನಾಭಿಪ್ರಾಯಗಳು, ಈ ಭಿನ್ನಾಭಿಪ್ರಾಯಗಳನ್ನು ಮತ್ತಷ್ಟು ತೀಕ್ಷ್ಣಗೊಳಿಸುವ ಉದ್ದೇಶದಿಂದ ಅವರು ಮಿತ್ತೆರಾಂ ಅವರಿಗೆ ಬೆಂಬಲ ನೀಡುವಂತೆ ಪ್ರೇರೇಪಿಸಬಹುದು. ಈಗಿರುವಂತೆಯೇ ಪಶ್ಚಿಮದ ಸಮಾಜವಾದಿಗಳು ಇ.ಇ.ಸಿ, ನ್ಯಾಟೋ, ಯುರೋ-ಕಮ್ಯುನಿಜಂ, ಕಮ್ಯುನಿಸ್ಟರೊಂದಿಗೆ ಸಹಕಾರ ಹಾಗೂ ಇಸ್ರೇಲ್-ಅರಬ್ ಘರ್ಷಣೆಗಳ ಬಗ್ಗೆ ಬೇರೆ ಬೇರೆಯೇ ಆದ ಅಭಿಪ್ರಾಯಗಳನ್ನು ಹೊಂದಿದ್ದಾರೆ. ಮಿತ್ತೆರಾಂ ಅವರೂ ಸ್ಮಿಡ್ಟ್ ಮತ್ತು ಬ್ರಿಟಿಷ್ ಲೇಬರ್ ನಾಯಕತ್ವಕ್ಕೆ ಸಮಭಾರದಂತೆ ಕಾಣಿಸಬಹುದು ಎಂದು ಭಾವಿಸುತ್ತಾರೆ.

ಆದರೆ ಪೋಲೆಂಡಿನ ವಿದ್ಯಮಾನಗಳು ಇತರೆ ಬೇಡಿಕೆಗಳನ್ನು ಸೃಷ್ಟಿಸುವ ಸಾಧ್ಯತೆಯಿದೆ. ಪೋಲೆಂಡಿನ ವಿದ್ಯಮಾನಗಳ-ಈ ರೋಗವು-ಪೂರ್ವ ಯೂರೋಪಿನ ಇತರೆ ರಾಷ್ಟ್ರಗಳಿಗೆ ಹರಡಿದ್ದೇ ಆದರೆ ಒಂದೆಡೆಗೆ ಇಟಲಿಯ ಕಮ್ಯುನಿಸ್ಟ್ ಪಕ್ಷದಿಂದ ಇನ್ನೊಂಡೆಗೆ ಫ್ರಾನ್ಸಿನಲ್ಲಿ ಕಂಪನ ಯುಕ್ತ ಹಾಗೂ ತೀವ್ರ ಜನತಾಂತ್ರಿಕ ಸಮಾಜವಾದದಿಂದ ಅದು ಪಡೆಯುತ್ತಿರುವ ಸೈದ್ಧಾಂತಿಕ ಪ್ರತಿಕ್ರಿಯೆಗೆ ಮಾಸ್ಕೋದಲ್ಲಿಯ ಕಮ್ಯುನಿಸ್ ನಾಯಕತ್ವವನ್ನು ನಿಜವಾಗಿಯೂ ತುಂಬಾ ಕಳವಳಕ್ಕೆ ಈಡು ಮಾಡಬಹುದು. ಮಾಸ್ಕೊ ವ್ಯಕ್ತಪಡಿಸಬಹುದಾದ ಪ್ರಬಲ ಪ್ರತಿಕ್ರಿಯೆಯು ಮಿತ್ತೆರಾಂ ಹಾಗೂ ಮಾರ್ಷೆ ಅವರ ನಡುವಿನ ಬಗ್ಗೆ ತಣ್ಣಗಾಗಿ ವರ್ತಿಸಿದರೂ ಸಹ ಬಾಲಬಡುಕ ಫ್ರಾನ್ಸಿನ ಕಮ್ಯುನಿಸ್ಟ ಪಕ್ಷಕ್ಕೆ ಹಳೆಯ ಸೈದ್ಧಾಂತಿಕ ಬಿಗಿ ಕವಚವನ್ನು ತೊಡಿಸಬಹುದು ಹಾಗೂ ತನ್ನ ಚಿರಪರಿಚಿತವಾದ ಅನುಸರಣಾವಾದದಿಂದಾಗಿ ಪಕ್ಷವು ಅದನ್ನು ಒಪ್ಪಲೇಬೇಕಾದೀತು ಇದೂ ಕೂಡ ಮಿತ್ತೆರಾಂ ಅವರಿಗೆ ಕಮ್ಯುನಿಸ್ಟರು ನೀಡುತ್ತಿರುವ ಬೆಂಬಲದ ಮೇಲೆ ಪ್ರತಿಕೂಲಕರ ಪರಿಣಾಮಗಳನ್ನು ಬೀರುತ್ತದೆ.

ಬಲಪಂಥದ ಸವಾಲು ಸಹ ಅಷ್ಟೇ ಪ್ರಬಲವಾಗಿದೆ. ಸ್ಟಾಕು ವಿನಿಮಯ ಹಾಗೂ ಷೇರು ಮಾರುಕಟ್ಟೆಗಳು ಚುನಾವಣೆಯ ಫಲಿತಾಂಶಕ್ಕೆ ಅತ್ಯಂತ ಪ್ರತಿಕೂಲಕರವಾದ ಪ್ರತಿಕ್ರಿಯೆಯನ್ನು ತೋರಿಸಿವೆ. ಹೊರ ಹೋಗುತ್ತಿರುವ ಪ್ರಧಾನಿ ರೇಮೊಂಡ್

ಜ್ಯಾರ್ ಅವರು ಬರಲಿರುವ ಗಂಡಾಂತರಗಳ ಬಗ್ಗೆ ತನ್ನ ರಾಷ್ಟ್ರಕ್ಕೆ ಈಗಾಗಲೇ ಎಚ್ಚರಿಕೆ ಕೊಟ್ಟಿದ್ದಾರೆ. ಶೇಕಡಾ 18ಕ್ಕಿಂತ ಹೆಚ್ಚು ಮತಗಳನ್ನು ಪಡೆದ ಅಧ್ಯಕ್ಷೀಯ ಅಭ್ಯರ್ಥಿಯಾದ ಹಾಗೂ ಮುತ್ಸದ್ದಿ ರಾಜಕಾರಣಿ ಜ್ಯಾಕ್ ಚಿರಾ ಕೂಡ ಒಬ್ಬ ಪ್ರಬಲ ವಿರೋಧಿಯಾಗಿದ್ದಾರೆ. ಬದಲಾವಣೆಯು ಪ್ರತಿಕ್ರಿಯೆಯನ್ನು ತೀವ್ರಗೊಳಿಸುವ ಆವಶ್ಯಕತೆಯಿರುವಾಗಲೂ ಸಹ ಮಿತ್ತೆರಾಂ ಅವರ ಕ್ರಮ ಕ್ರಮವಾದ ಸೌಮ್ಯ ಸುಧಾರಣೆಗಳನ್ನು ಪಟ್ಟಭದ್ರ ಹಿತಾಸಕ್ತಿಗಳು ಪ್ರಬಲವಾಗಿ ವಿರೋಧಿಸುತ್ತವೆ. ಮತ್ತೊಂದು ಪ್ರಬಲಶಕ್ತಿಯಾದ ಅಮೇರಿಕಾ ಮನೋಭಾವವೂ ಉಗಮಗೊಳ್ಳುತ್ತಿರುವ ಈ ಶಕ್ತಿಯ ಸಮತೋಲನದ ಮೇಲೆ ಪ್ರಭಾವ ಬೀರುವ ಶಕ್ತಿಯನ್ನು ಹೊಂದಿದೆ. ಲೆನಿನ್‌ಗೆ ಕರೆನ್‌ಸ್ಕಿ ಇದ್ದಂತೆ, ರಂಗಮಂಟಪದ ಹಿಂಭಾಗದಲ್ಲಿ ಕಾಯ್ದು ಕುಳಿತಿರುವ ಮಾರ್ಷೆಗೆ ಮಿತ್ತೆರಾಂ ಒಬ್ಬ ಕರೆನ್‌ಸ್ಕಿಯೇ ಎಂಬ ಹುಚ್ಚು ಕಾತರತೆ ರೀಗ್ಯಾನ್ ಆಡಳಿತದ ಹಸಿರು ಕಲ್ಪನಾಲೋಕಕ್ಕೆ ನಿಲುಕದಂತಹುದೇನಲ್ಲ. ಏನೇ ಆಗಲಿ, ರೂಸ್‌ವೆಲ್ಟ್, ಟ್ರೂಮನ್ ಮತ್ತು ಕೆನಡಿ ಕಟ್ಟಿದುದನ್ನು ಐಕ್, ಜಾನ್‌ಸನ್, ಅಥವಾ ನಿಕ್ಸನ್ ಕಿತ್ತೊಗೆಯಲು ಧೈರ್ಯ ಮಾಡದಿದ್ದನ್ನು ಮಣ್ಣು ಪಾಲು ಮಾಡುವುದರಲ್ಲಿ ನಿರತನಾಗಿರುವ ಅಧ್ಯಕ್ಷನೊಬ್ಬ ಮಿತ್ತೆರಾಂ ಅವರ ಕ್ಷೇಮಾಭಿವೃದ್ಧಿಯನ್ನು ಪ್ರೀತಿಸಲಾರ.

ಹೊರ ಹೋಗುತ್ತಿರುವ ಅಧ್ಯಕ್ಷ ಗಿಸ್ಕಾರನ ಸೋಲನ್ನು ದೃಢಪಡಿಸಿದ ನಿರುದ್ಯೋಗ ಮತ್ತು ಹಣ ದುಬ್ಬರದಿಂದ ಬೆಳೆಯುತ್ತಿರುವ ಸಮಸ್ಯೆಗಳಿಗೆ ಮಿತ್ತೆರಾಂ ಅವರು ಪ್ರಥಮ ಆದ್ಯತೆಯನ್ನು ಕೊಟ್ಟಿದ್ದಾರೆ. ಒಂದೆಡೆಗೆ ಅಮೇರಿಕಾ ಹಾಗೂ ಅದರಿಂದ ನಿಯಂತ್ರಿತವಾದ ಅಂತರ್ ರಾಷ್ಟ್ರೀಯ ಏಜೆನ್ಸಿಗಳುಹಾಗೂ ಇನ್ನೊಂದೆಡೆಗೆ ಕಮ್ಯೂನಿಸ್ಟರ ಕಾರ್ಮಿಕ ಸಂಘಟನೆಯಾದ ಸಿ.ಜಿ.ಟಿ. ಮತ್ತು ಇತರೆ ಕಾರ್ಮಿಕ ಸಂಘಟನೆಗಳು ಈ ಸಮಸ್ಯೆಗಳನ್ನು ಪರಿಹರಿಸಲು ಅವರಿಗೆ ಸಾಕಷ್ಟು ಸಹಕಾರ ಹಾಗೂ ಶಾಂತಿ ಸೌಹಾರ್ದತೆಗೆ ಅವಕಾಶ ಕೊಡುತ್ತವೆಯೆ ?

ಪರಿಸ್ಥಿತಿಯ ಒತ್ತಡಗಳಿಗೆ ಬದಲಾವಣೆಯ ಒತ್ತಾಯಗಳನ್ನು ಹೊಂದಿಸಿಕೊಳ್ಳುತ್ತ ಅಥವಾ ಬದಲಾವಣೆಯ ಒತ್ತಾಯಗಳನ್ನು ನಿಧಾನವಾಗಿ ತೀವ್ರಗೊಳಿಸುತ್ತ ಅವರು ಹೇಗೆ ತಮ್ಮ ಕೆಲಸವನ್ನು ಜಾಣ್ಮೆಯಿಂದ ನಿರ್ವಹಿಸುತ್ತಾರೆ ? ಕೆಲವು ಪ್ರಮುಖ ಕೈಗಾರಿಕೆಗಳ ರಾಷ್ಟ್ರೀಕರಣದ ಕಾರ್ಯಕ್ರಮವನ್ನು ಹೇಗೆ ಸ್ವೀಕರಿಸಬಹುದು ?

ಹೊಸ ಅಧ್ಯಕ್ಷರು ಎದುರಿಸ ಬೇಕಾಗಿರುವ ಭಾರಿ ಸವಾಲುಗಳಲ್ಲಿ ಇವು ಹಲವು ಮಿತ್ತೆರಾಂಗಿರುವಂತಹ ಸಹನೆ ಮತ್ತು ಜಾಣ್ಮೆಯಿರುವ ವ್ಯಕ್ತಿ ಮಾತ್ರ ಈಸವಾಲುಗಳನ್ನು ಎದುರಿಸಬಲ್ಲ.

—ಅನುವಾದ : ಹನುಮಂತ

# ಗಂಡು ಹೆಣ್ಣಿನ ಸಂಬಂಧ : ಒಂದು ಸಂಕೀರ್ಣ ಅನುಭವ

—ಶಶಿಕಲಾ ವಸ್ತ್ರದ

ಶೂದ್ರದಲ್ಲಿ ಪ್ರಕಟವಾದ ಶ್ರೀಮತಿ ವೆಂಕಟಲಕ್ಷ್ಮಿಯವರ ಲೇಖನಕ್ಕೆ ಇದು ವಿಮರ್ಶಾತ್ಮಕ ಪ್ರತಿಕ್ರಿಯೆ ಅಲ್ಲ. ಆ ಲೇಖನ ಓದಿದೊಡನೆ ನನ್ನನ್ನು ಮುತ್ತಿದ ಕೆಲ ವಿಚಾರಗಳನ್ನು ಮಾತ್ರ ಇಲ್ಲಿ ಹೇಳುತ್ತಿದ್ದೇನೆ. ಎಲ್ಲರೊಂದಿಗೆ ಚರ್ಚೆ ಮಾಡಿ ಒಂದು ನಿರ್ಣಯಕ್ಕೆ ಬರಲು ಲೈಂಗಿಕ ಸಮಸ್ಯೆ ಸಾರ್ವಜನಿಕ ಸಮಸ್ಯೆ ಅಲ್ಲ. ಅದು ತೀರ ವೈಯಕ್ತಿಕ ಮತ್ತು ಅಷ್ಟೇ ಸಂಕೀರ್ಣ. ಅದಕ್ಕೆಂದೇ ಎಷ್ಟು ಜೀವಗಳೋ ಅಷ್ಟು ವಿಭಿನ್ನ ಅನುಭವಗಳು ಈ ವಿಷಯದಲ್ಲಿ.

ಮಾನವ ಇತಿಹಾಸದ ಪ್ರಾರಂಭದಲ್ಲಿ ವಿವಾಹ-ಕುಟುಂಬಗಳು ನಿರ್ಮಾಣವಾಗುವುದಕ್ಕಿಂತಲೂ ಮೊದಲು ಆದಿವಾಸಿಗಳಲ್ಲಿ ಸಂತಾನ ಮುಂದುವರಿಸಲು ತಾಯಿಯಾದವಳು ತನ್ನ ಹಿರಿಯ ಮಗನೊಂದಿಗೆ ದೈಹಿಕ ಸಂಬಂಧ ಬೆಳೆಸುತ್ತಿದ್ದಳು. (ಓಲ್ಗಾ-ಗಂಗಾ) ಇಲ್ಲಿ ನೀತಿ-ಕಟ್ಟಳೆ-ಲೈಂಗಿಕ ತೃಪ್ತಿ ಯಾವುದೂ ಇಲ್ಲ. ಸಂತಾನೋತ್ಪತ್ತಿ ಒಂದೇ ಮುಖ್ಯ. ಬರಬರುತ್ತ ವಿವಾಹದ ಚೌಕಟ್ಟು, ಅದರೊಳಗೇ ಪಡೆವ ದೈಹಿಕ ಸುಖಕ್ಕೆ ಮನ್ನಣೆ. ಹೊರತಾದ ಸಂಬಂಧ ಅನೈತಿಕ-ಪಾಪಕರ ಎಂಬ ಭಾವನೆಯನ್ನು ಮನುಷ್ಯ ಬೆಳೆಸಿಕೊಂಡ. ಈ ಆಧುನಿಕ ಯುಗದಲ್ಲಂತೂ ಬದುಕಿನ ಕ್ಷಣ ಭಂಗುರತೆ-ಬಾಳಿನಲ್ಲಿ ಅಪನಂಬಿಕೆ-ಮಾನಸಿಕ ಅಸ್ವಸ್ಥತೆಗಳಿಂದ ಮನುಷ್ಯ ಲೈಂಗಿಕ ಸಂಬಂಧಗಳ ಬಗ್ಗೆ ಬೇರೆ ಬೇರೆ ದೃಷ್ಟಿ ಬೆಳೆಸಿಕೊಂಡಿದ್ದಂತೂ ನಿಜ. ನಮ್ಮ ಪೂರ್ವಜರು ಮಾನವ ಬದುಕಿಗೆ ಮೂಲ ಅವಶ್ಯಕತೆಗಳೆಂದು ಧರ್ಮ-ಅರ್ಥ-ಕಾಮ-ಮೋಕ್ಷಗಳನ್ನು ಬೋಧಿಸಿದರು. ಕಾಮ ಅವಶ್ಯವಾದರೂ (ಕಾಮ ಅಂದರೆ ಕೇವಲ ದೈಹಿಕ ಕಾಮನೆಯಲ್ಲ ಎಲ್ಲ ತರದ ಕಾಮನೆಗಳಲ್ಲಿ ಇದೂ ಒಂದು) ಅದನ್ನು ವಿವಾಹದ ಚೌಕಟ್ಟಿನಲ್ಲೇ ಪಡೆಯತಕ್ಕದ್ದು ಎಂದು ಅಪ್ಪಣೆ ಕೊಡಿಸಿದರು. ವಿವಾಹದ ಉದ್ದೇಶ ಸಂತಾನೋತ್ಪತ್ತಿ. ಇಲ್ಲಿ ಶಾರೀರಕ ಅತೃಪ್ತಿಗಳು ಗೌಣ. ಲೈಂಗಿಕ ತೃಪ್ತಿಯಾದರೆ ದಾಂಪತ್ಯ ಸಫಲವಲ್ಲ. ಅದು ಅತೃಪ್ತವಾಗಿದ್ದರೂ ಮಕ್ಕಳಾದರೆ ವಿವಾಹಜೀವನ ಸಾರ್ಥಕ ಎಂಬುದು ನಾವು ನಂಬಿ

ಕೊಂಡು ಬಂದ ಪರಂಪರೆ. ನಾನು ಚಿಕ್ಕವಳಾಗಿದ್ದಾಗ ಚಂದಮಾಮದಲ್ಲಿ ಒಂದು ಕತೆ ಓದಿದ ನೆನಪಾಗುತ್ತದೆ. ಋಷಿಯೊಬ್ಬ ಧ್ಯಾನಸಕ್ತನಾಗಿರುವಾಗ ಈ ಜೀವನದ ಉದ್ದೇಶವೇನು ? ಎಂಬ ವಿಚಾರ ಬಂದಿತಂತೆ "ಕಿಮರ್ಥಂ ? ಕಿಮರ್ಥಂ ?" ಎಂದು ಕೇಳಿದಾಗ ಪ್ರಕೃತಿ "ಪ್ರಜಾರ್ಥಂ ಪ್ರಜಾರ್ಥಂ" ಎಂದು ಉತ್ತರ ಕೊಟ್ಟಿತು. ಋಷಿ ತಪಸ್ಸು ಬಿಟ್ಟು ಪ್ರಜೋತ್ಪತ್ತಿಯನ್ನು ಕೈಕೊಂಡನೋ ಏನೋ-ಮುಂದಿನದು ನೆನಪಿಲ್ಲ. ಹೀಗೆ ನಮ್ಮ ಹಿರಿಯರು ದೈಹಿಕ ಕಾಮನೆಯನ್ನು ಅತ್ಯಂತ ಉನ್ನತವಾದ ಉದ್ದೇಶದ ಹೊದಿಕೆಯಲ್ಲಿಟ್ಟು ಗೌರವಿಸಿದರು.

ಇಲ್ಲಿ ಇಬ್ಬರೂ ಸಮಸ್ಯೆ ಉಳ್ಳವರೇ, ವಿವಾಹಿತರು-ಇನ್ನಿತರರು. ಪ್ರಥಮ ರಾತ್ರಿಯಂದೇ ಈ ವಿಷಯದಲ್ಲಿ ಭ್ರಮನಿರಸನಗೊಳ್ಳುವ ಹುಡಿಗೆಯರ ಕುರಿತು ಲೇಖಕಿಯವರು ಹೇಳಿದ ಮಾತು ತೀರ ನಿಜ. ಈ ದಿನದಂದು ಗಂಡಿಗಿಂತ ಹೆಣ್ಣು ಹೆಚ್ಚು ಭಾವಾವಿಷ್ಟಳು. ಇಷ್ಟು ದಿನ ಕಾದುಕೊಂಡು-ಜತನಮಾಡಿಕೊಂಡು ಬಂದ ತನ್ನ ಮಾನಸಿಕ ದೈಹಿಕ ರಹಸ್ಯಗಳನ್ನು ಭಯ-ಲಜ್ಜೆ-ಸಂಕೋಚಗಳಿಂದ ಅವಳಿಂದು ಇನ್ನೊಂದು ಜೀವದೊಂದಿಗೆ ಹಂಚಿಕೊಳ್ಳುವವಳಿದ್ದಾಳೆ. ಹೆಚ್ಚಾನು ಹೆಚ್ಚು ಮಧ್ಯಮ ತಳಗತಿಯ ಅಷ್ಟೊಂದು ನಗರವಲ್ಲದ ವಾತಾವರಣದಲ್ಲಿ ಬೆಳೆದ ಹುಡಿಗೆಯುವರು ಗಂಡು-ಹೆಣ್ಣಿನ ಸಂಬಂಧದಲ್ಲಿ ತೀರಾ ಭಾವುಕರಾಗಿರುತ್ತಾರೆ. ಆರತಕ್ಷತೆಗಳಿಗೆ ಹೋದಾಗ ಕೇಳಿದ ಜಾನಪದ ಗೀತೆಗಳ ಗಂಡು-ಹೆಣ್ಣಿನ ಅತ್ಯಂತ ಮಾರ್ದವವಾದ ಮಧುರವಾದ ಸಂಬಂಧ ಶರಚ್ಚಂದ್ರರ ಕಾದಂಬರಿಗಳಲ್ಲಿ ಕಾಣುವ ಗಂಭೀರವಾದ-ಸುಸಂಸ್ಕೃತವಾದ-ಗಾಢವಾದ ಪುರುಷಪ್ರೇಮ-ಕಾದಂಬರಿ-ಸಿನಿಮಾಗಳಲ್ಲಿನ ಆವೇಶಭರಿತವಾದ ನಾಯಕ-ನಾಯಕಿಯರ ಪ್ರೀತಿ. ಇವುಗಳೆಲ್ಲವುಗಳಿಂದಲೂ ಹುಡುಗೆಯರು ತಮ್ಮದೇ ಆದ ತೀರ ಕೋಮಲವಾದ ಪ್ರತಿಕ್ರಿಯೆಯನ್ನು ನಿರೀಕ್ಷಿಸಿ ಪ್ರಥಮದಿನದಂದು ರೋಮಾಂಚಿತರಾಗಿ ಕಾಲಿಡುತ್ತಾರೆ. ಅಲ್ಲಿ ಸ್ನೇಹಿತೆಯಂತೆ ಅವಳನ್ನು ಅರ್ಥಮಾಡಿಕೊಂಡು ಪತ್ನಿಯಂತೆ ಗೌರವಿಸಿ, ಪ್ರೇಯಸಿಯಂತೆ ರಸಿಕತೆಯಿಂದ ಮನಸ್ಸು ಗೆದ್ದು ಮೈ ಗೆದ್ದರೆ ಅವಳು ಧನ್ಯಳು. ಮನಸ್ಸು ಅರಳದೇ ಮೈ ಅರಳುವುದಿಲ್ಲ. ಮೈ-ಮನಸ್ಸು ಅರಳಿದ ದೈಹಿಕಸಂಬಂಧ ಮಾತ್ರ ಪೂರ್ಣತೃಪ್ತಿ ನೀಡಬಲ್ಲದು. ಹಾಗಾಗದೆ ಬೇಟೆಯನ್ನು ಕಂಡ ಹುಲಿಯಂತೆ ಕ್ರೂರವಾದ ಹಿಂಸೆಯಿಂದ ತನ್ನ ಹಸಿವನ್ನು ಹಿಂಗಿಸಿಕೊಳ್ಳುವ ಪ್ರಾಣಿಗಳ ಕೈಯಲ್ಲಿ ಸಿಕ್ಕ ಹೆಣ್ಣಿನ ಲೈಂಗಿಕೇಚ್ಛೆ ಅಂದೇ ಮುರುಟಿ ಬಾಳೆಲ್ಲಾ ಅವಳಿಗದೊಂದು ಹಿಂಸೆಯಾಗಿ ಬಿಡುತ್ತದೆ. ಇವೆರಡಲ್ಲದೆ ಲೇಖಕಿ ಹೇಳಿದಂತೆ ಇನ್ನೊಂದು ಮುಖವೂ ಇದೆ. ಚಿಕ್ಕಂದಿನಿಂದ ಬೆಳೆದ ಹುಡುಗ-ಹುಡಿಗೆಯನ್ನು ಸಂಬಂಧಿಕರಲ್ಲಿ ಮದುವೆ ಮಾಡಿದರು. ಇಬ್ಬರೂ ಪ್ರಾಯಸ್ಥರು, ಆರೋಗ್ಯಶಾಲಿಗಳು-ಪರಸ್ಪರ ಪ್ರೀತಿ-ಗೌರವ ಉಳ್ಳವರು. ಆದರೆ ದೈಹಿಕ

ಆಕರ್ಷಣೆಯೇ ಇಲ್ಲ. ವೈದ್ಯರನ್ನು ಕಂಡರು ಪ್ರಯತ್ನಿಸಿ ಸೋತರು. ಮಾನಸಿಕ ತೊಳಲಾಟವಾಯಿತು ಹೊರತು ಬೇರೇನೂ ಆಗಲಿಲ್ಲ. ಇದೇ ತೊಳಲಾಟದಲ್ಲಿ ಇಬ್ಬರೂ 3 ವರ್ಷ ಒಂದೇ ಮನೆಯಲ್ಲಿ ಬಾಳಿ ಒಂದೇ ಒಂದು ದಿನವೂ ಶಾರೀರಿಕ ಸಂಪರ್ಕ ಉಂಟಾಗಲಿಲ್ಲ. ಗಂಡ ಅಷ್ಟೊತ್ತಿಗೆ ನೆರಮನೆಯ ಹುಡುಗಿಯೊಂದಿಗೆ ಸಂಪರ್ಕ ಬೆಳೆಸಿಯಾಗಿತ್ತು. ಇಬ್ಬರೂ ಸುಖಕ್ಕೆ ಎರವಾಗುವುದಕ್ಕಿಂತ ಒಬ್ಬರಾದರೂ ಅದನ್ನು ಪಡೆಯಲಿ ಎಂದು ಹುಡುಗಿ ಅವನ ಮದುವೆ ಮಾಡಿ ದೂರ ಸರಿದಳು. ಈಗ ಅವಳೇನು ಮಾಡಬೇಕು? ಮರುಮದುವೆಗೆ ಯಾರಾದರೂ ಆಗುವವರಾರು? ಹೆಂಡತಿ ಬಿಟ್ಟವನಿಗೆ, ಮಕ್ಕಳಿದ್ದ ವಿಧುರನಿಗೆ ಹೇರಳ ವರದಕ್ಷಿಣೆ ಕೊಟ್ಟು ವಿಜೃಂಭಣೆಯಿಂದ ಕನ್ಯೆಯರೊಂದಿಗೆ ಮದುವೆ ಮಾಡುವ ಅವಕಾಶಗಳೇ ಹೆಚ್ಚಿರುವಾಗ ಇಂಥವರ ಸಮಸ್ಯೆಗೆ ಏನು ಪರಿಹಾರ? ದಾಂಪತ್ಯ ವಿಚ್ಛೇದನ ಪೊಂದಿದ ಹೆಣ್ಣಿನ ಬಗ್ಗೆ ಇಂಥವೇ ಹಲವಾರು ಕಾರಣಗಳಿದ್ದರೂ ಅದಕ್ಕೆ ಇವಳ ಅನೀತಿಯೇ ಕಾರಣ ಎಂದು ನಿರ್ಣಯಿಸಿ ಅವಳನ್ನು ಹೀನದೃಷ್ಟಿಯಿಂದ ನೋಡುವ ಸಂಪ್ರದಾಯವೇ ನಮ್ಮಲ್ಲಿ ಬೆಳೆದು ಬಿಟ್ಟಿದೆ.

ಇದೂ ಅಲ್ಲದೆ ಇದೊಂದು ಅಷ್ಟೊಂದು ಮುಖ್ಯವೇ ಅಲ್ಲದ ವಿಷಯ ಇನ್ನಿತರ ವಿವಾಹಿತರಿಗೆ. ವೈವಾಹಿಕ ಜೀವನದಲ್ಲಿ ಲೈಂಗಿಕತೃಪ್ತಿ ಗೌಣವಾಗಿರುವುದರಿಂದ, ಮಕ್ಕಳಾದ ಮೇಲೆ ತಾಯ್ತನ ತೃಪ್ತವಾಗುವುದರಿಂದ, ನಮ್ಮಲ್ಲಿ ಬಹಳ ಜನ ಹೆಣ್ಣುಮಕ್ಕಳಿಗೆ ತಾಯ್ತನದ ತೃಪ್ತಿ ಹೆಣ್ತನದ ತೃಪ್ತಿಗಿಂತ ಹೆಚ್ಚು ರೋಮಾಂಚಕವೂ ಸುಖಕರವೂ ಆಗಿರುವುದರಿಂದ ಈ ಕುರಿತು ವಿಚಾರವನ್ನೇ ಮಾಡುವುದಿಲ್ಲ. ನನ್ನ ಸ್ನೇಹಿತೆ ಒಬ್ಬಳು ೧೬ನೇ ವಯಸ್ಸಿಗೆ ಮದುವೆಯಾದಳು. ಈಗ ಅವಳಿಗೆ ೨೧ ವರ್ಷ. 3 ಜನ ಮಕ್ಕಳಿದ್ದಾರೆ. ಗಂಡನ ಬಗ್ಗೆ ಪ್ರೀತಿ ಇದೆ. ಅವನೂ ಅಷ್ಟೇ. ಆದರೆ ಲೈಂಗಿಕಾಸಕ್ತಿಯಲ್ಲಿ ಅವನಿಗಿರುವಷ್ಟು ಉತ್ಸಾಹ ತನಗೆ ಮಕ್ಕಳಾದ ಮೇಲೆ ಹೊರಟುಹೋಗಿದೆ. ಯಾಕಾದರೂ ರಾತ್ರಿಯಾಗುತ್ತದೋ ಅನಿಸುತ್ತದೆ. ಅವರನ್ನೂ ಬೇಸರಪಡಿಸಲಾರೆ" ಎಂದು ಗೋಳಾಡುತ್ತಾಳೆ ೨೧ರ ತರುಣಿ! ಇನ್ನೊಬ್ಬಳು, ಅದರಾಗೇನ ಸುಖ ಐತಿ ತಾಯಿ ನಿದ್ದಿಗೆಟ್ಟು ಮೈನುಗ್ಗ ಮಾಡ್ಕೋಳೂದು, ಕಣ್ಣತುಂಬ ನಿದ್ದಿ ಮಾಡಿದ್ರ ಮೈ ಹಗರಾಗ್ತದ ಅನ್ನುತ್ತಾಳೆ. ಇನ್ನೊಬ್ಬರು ಮಧ್ಯ ವಯಸ್ಸಿನ ಮಹಿಳೆ ವಯಸ್ಸಿಗೆ ಬಂದ ಮಕ್ಕಳಿದ್ದಾರೆ ಆದರೂ "ಒಂದಿನವೂ ನನ್ನಿಂದ ಗಂಡನನ್ನು ಬಿಟ್ಟು ಇರಲಾಗುವುದಿಲ್ಲ" ಎನ್ನುತ್ತಾರೆ. ಹೀಗೆ ನೂರೆಂಟು ಸಮಸ್ಯೆಗಳನ್ನು ಒಳಗೊಂಡಿದೆ ಲೈಂಗಿಕತೆ.

ಇವು ವಿವಾಹಿತರ ಸಮಸ್ಯೆಗಳು. ಇನ್ನಿತರರಲ್ಲಿ ಅನಿವಾರ್ಯ ಕಾರಣಗಳಿಂದ ಅವಿವಾಹಿತರಾಗೀ ಉಳಿದವರು, ದಾಂಪತ್ಯ ವಿಚ್ಛೇದನೆ ಹೊಂದಿದವರು, ವಿವಾಹಿತರಿದ್ದೂ-

ಸುಖಕ್ಕೆ ಎರವಾದವರೆಲ್ಲರಿಗೂ ಅವರದೇ ಆದ ಸಮಸ್ಯೆಗಳಿರುತ್ತವೆ. ದೈಹಿಕಬಯಕೆ ಮೂಲಭೂತ ಅವಶ್ಯಕತೆಯಾದುದರಿಂದ ಅದು-ಪ್ರತಿಯೊಬ್ಬರನ್ನೂ ಒಂದು ಘಟ್ಟದಲ್ಲಿ ಅಲ್ಲಾಡಿಸುತ್ತದೆ. ಹಸಿವೆಗೆ ಬ್ರೆಡ್ಡು ಕದ್ದ ಹುಡುಗನೊಬ್ಬನ ಬಗ್ಗೆ ಇರುವ ಅನುಕಂಪ-ವೈ ಹಸಿವುಳ್ಳವರ ಬಗ್ಗೆ ಇಲ್ಲ. ಅವಿವಾಹಿತ-ವಿಧುರ-ರೋಗಿ ಹೆಂಡತಿಯನ್ನು ಪಡೆದ ಗಂಡಂದಿರ ಹೊರಗಿನ ಆಸಕ್ತಿಗಳ ಬಗ್ಗೆ ನಾವು ತೋರಿಸುವ ದೊಡ್ಡ ಮನಸ್ಸು ಅದೇ ಸ್ಥಿತಿಯಲ್ಲಿರುವ ಹೆಣ್ಣಿನ ಬಗ್ಗೆ ಇಲ್ಲ. ಗಂಡ ಅನವರತ ಹಾಸಿಗೆ ಹಿಡಿದಾಗ ಹೆಂಡತಿ ಶಾರೀರಿಕ ಕಾಮನೆಗೆ ಮನಸ್ಸು ಮಾಡಿದರೆ ಅಮಾನುಷ ಕ್ರೌರ್ಯವಾಗಿ ಕಾಣಬಹುದು ಸುಸಂಸ್ಕೃತ ಮನಸ್ಸುಗಳಿಗೆ. ಆದರೆ ಅದೇ ದೃಷ್ಟಿಯನ್ನು ಪುರುಷರ ಬಗ್ಗೆಯೂ ಇಟ್ಟು ಕೊಳ್ಳಲು ಅವರ ಸುಸಂಸ್ಕೃತಿ ಯಾಕೆ ಬೇಡ ಅನ್ನುತ್ತದೆ ? ದಾಂಪತ್ಯದಲ್ಲಿರುವ ಶ್ರದ್ಧೆ-ನಿಷ್ಠೆಗಳು ಪರಸ್ಪರರನ್ನು ಪ್ರಾಮಾಣಿಕವಾಗಿಡುತ್ತವೆ. ಇಂಥ ದಾಂಪತ್ಯದಲ್ಲಿ ದೇಹದ ಕಾಮನೆಗಳು ದೊಡ್ಡದಾಗಿ ಕಾಡುವುದಿಲ್ಲ. ತೀರ ಎಳೆಯ ಪ್ರಾಯದಲ್ಲಿ ಪತ್ನಿಯನ್ನು ಕಳೆದುಕೊಂಡ ಯುವಕರೊಬ್ಬರು ಮರುಮದುವೆಗೆ ಪ್ರಚೋದಿಸಿದಾಗ—ಮೊದಲ ಪತ್ನಿಯ ಮೇಲಿನ ಪ್ರೀತಿಯಿಂದ ನಿರಾಕರಿಸಿ ಕೊನೆಯವರೆಗೂ ಹಾಗೇ ಉಳಿದರು. ವಿವಾಹೇತರರಲ್ಲಿ ಕೆಲವರು ಸಂಯಮ ಸಾಧಿಸಬಹುದು, ಕೆಲವರು ರಾಜಾರೋಷವಾಗಿ ಬೇರೆ ದಾರಿಗಳಿಂದ ಸುಖಿಸಬಹುದು, ಇನ್ನಿತರರು ಸಮಾಜದ ಭಯದಿಂದ ಕದ್ದಾದರೂ ಕಾಮನೆಗಳನ್ನು ಹಿಂಗಿಸಿಕೊಳ್ಳಬಹುದು. ಅದು ಅವರವರ ಪರಿಸರ, ಸಂಸ್ಕಾರ ಮನೋ ಬಲವನ್ನವಲಂಬಿಸಿದ್ದು. ಇಂಥ ಪ್ರಸಂಗದಲ್ಲಿ ಯಾರಿಗೂ ಅನ್ಯಾಯವಾಗದಂತಿದ್ದರೆ. ಹಸಿದವರ ಬಗ್ಗೆ ಹೊಟ್ಟೆತುಂಬಿದವರು ಆಡಿಕೊಳ್ಳುವ ಅವಕಾಶವಿಲ್ಲ. ಅದೂ ಅಲ್ಲದೆ ದೈಹಿಕತೃಪ್ತಿ ಅನ್ನುವುದು ದೇಹಕ್ಕೆ ಸಂಬಂಧಿಸಿದ್ದಲ್ಲವೇ ಅಲ್ಲ. ಅದೊಂದು ಮನೋ ಕಾಮನೆ, ದೇಹ ಅದಕ್ಕೆ ಮಾಧ್ಯಮ ಮಾತ್ರ ಅಂತ ಒಬ್ಬರೆಂದರೆ ಮೈಗೂ ಒಂದು ಮನಸ್ಸಿದೆ ಅದಕ್ಕೂ ಬೇಕು-ಬೇಡಗಳಿವೆ ಅನ್ನುವವರೂ ಇರುವುದಿಲ್ಲ. ಎಲ್ಲರಿಗೂ ಲೈಂಗಿಕತೆ ಒಂದು ಚಪಲವಲ್ಲ. ಎಷ್ಟೋ ಸಂದರ್ಭಗಳಲ್ಲಿ ಅಸ್ವಸ್ಥ ಮನಸ್ಸನ್ನು ಸಂತೈಸ ಬಲ್ಲ ಕ್ರಿಯೆ ಮಾತ್ರ ಎಂಬುದೂ ಕೆಲವರ ವಾದ. ಅವರವರ ಮಟ್ಟಿಗೆ ಎಲ್ಲವೂ ಸತ್ಯ.

ಅಷ್ಟಕ್ಕೂ ದೈಹಿಕಬಯಕೆ ಮನುಷ್ಯನನ್ನು ಕೆಲಸಲ ಯಾಕೆ ತೀವ್ರವಾಗಿ ಕಾಡಿಸು ತ್ತದೆ? ಅದು ಬದುಕಿಗೆ ಅಷ್ಟೊಂದು ಅನಿವಾರ್ಯವೇ? ಗೆದ್ದುಕೊಳ್ಳಲೋ, ಹತ್ತಿಕ್ಕಲೋ ಯಾಕಾಗುವುದಿಲ್ಲ? ಬಹುಶಃ ಮನುಷ್ಯನಿಗೆ ಚಿರಂತನವಾಗಿ ಕಾಡುವ ಸಾವಿನಭಯ, ಏಕಾಕಿತನದ ಭಯ, ಅರಕ್ಷತೆಯ ಭಯಗಳು ಬಹುಮಟ್ಟಿಗೆ ಅದಕ್ಕೆ ಪ್ರಚೋದನೆ ಯೇನೋ. ಸಂತಾನ ಬೆಳೆಸುತ್ತ ತಾನು ಮುಂದುವರಿಯುತ್ತಿದ್ದೇನೆ ತನ್ನ ರಕ್ತದಲ್ಲಿ ಎಂಬ ಸಮಾಧಾನದಲ್ಲಿ ಸಾವಿನ ಭಯವನ್ನು ಗೆಲ್ಲಲು ಪ್ರಯತ್ನಿಸಿ ಆ ಕ್ರಿಯೆಯ ಬಗ್ಗೆ ಅಷ್ಟು

ತೀವ್ರವಾಗಿರಬಹುದು. ಇಲ್ಲ ಸದಾ ಆಳದಲ್ಲಿ ಕಾಡುವ ಒಂಟಿತನ, ಆ ಒಂದು ಗಳಿಗೆಯ ಅದ್ವೈತಭಾವದಲ್ಲಾದರೂ ಮರೆತೇನೋ ಎಂಬ ಹಂಬಲದಿಂದ ಅದರ ಒತ್ತಡ ಹೆಚ್ಚಾಗಿರಬಹುದು. ಇಲ್ಲ ಸದಾ ಕಂಗೆಡಿಸುವ ಅನಾಥ ಪ್ರಜ್ಞೆಯನ್ನು ಆ ಮಟ್ಟಿಗಾದರೂ ದೂರಮಾಡುವ ಭ್ರಮೆಯಿಂದ ಅದು ಬೇಕು ಅನಿಸಬಹುದು.

ಖಲೀಲಗಿಬ್ರಾನ್ ಹೇಳುತ್ತಾನೆ: ಸೃಜನಶೀಲರಿಗೆ ಲೈಂಗಿಕೇಚ್ಛೆ ಹೆಚ್ಚು ಪ್ರಬಲವಾಗಿರುತ್ತದೆ ಅಂತ. ಬಹುಶಃ ಸಾಮಾನ್ಯರಿಗಿಂತ ಇವರನ್ನೇ ಹೆಚ್ಚು ಕಾಡಿಸುವ ಈ ಬಾಳಿನ ನಿರರ್ಥಕತೆಯಿಂದುಟಾದ ವಿಷಣ್ಣಭಾವ, ಅನಾಥಪ್ರಜ್ಞೆ, ಒಂಟಿತನಗಳೇ ಕಾರಣವಾಗಿರಬಹುದು. ವಿವಾಹಬಾಹಿರವಾದ ಸಂಬಂಧದಲ್ಲಿ ಹೆಣ್ಣು ತಾಯಿಯಾಗದ ಆ ನಿಷ್ಫಲ ನಿರರ್ಥಕ ಕ್ರಿಯೆಯಲ್ಲಿ ತೃಪ್ತಿಗೆ ನೆರವಾಗುತ್ತಾಳೆ. ಅಲ್ಲದೆ ಪಾಪ ಪ್ರಜ್ಞೆಯೊಂದು ಆಳದಲ್ಲಿ ಕುಟುಕುತ್ತ ಅವಳು ಸುಖವಾಗಿ ನರಳುವುದಕ್ಕಿಂತ ಮಾನಸಿಕ ಹಿಂಸೆಯಿಂದಲೇ ನರಳುವಂತಾಗುತ್ತದೆ. ಆದರೂ ಅವಳನ್ನು ಹಿಂಡಿ ಹಿಪ್ಪೆ ಮಾಡುವ ಅಭದ್ರಭಾವ. ಏಕಾಂಗಿತನಗಳ ಒತ್ತಡದಿಂದಾಗಿ ಹೊರಗೂ ಉಳಿಯದೇ ಸುಖ ಸಿಕ್ಕೀತು ಎಂದು ಬಯಸಿ ಭ್ರಮನಿರಸನಗೊಂಡು ವ್ಯಸ್ತಳಾಗುತ್ತಾಳೆ. ಯಾಕೆಂದರೆ ಪುರುಷನ ತೋಳುಗಳಲ್ಲಿದ್ದು ಪರಕೀಯಪ್ರಜ್ಞೆ ಚುಚ್ಚುತ್ತಲೇ ಇರುವ ಪ್ರಸಂಗಗಳೂ ಇರಬಹುದು. ಇದಕ್ಕೆಂದೇ ಇರಬೇಕು. ಪ್ರೌಢವಿಚಾರಶೀಲ ಮಹಿಳೆಯರು ತಂದೆಯಂತೆ ವಾತ್ಸಲ್ಯ ತೋರುವ ಹಿರಿಯರನ್ನೇ ಪ್ರೇಮಿಸುತ್ತಾರೆ. ಸುರಕ್ಷತಾಭಾವವನ್ನು ಅದು ಹುಟ್ಟಿಸುತ್ತಿದ್ದುದಕ್ಕೇ ಇರಬೇಕು. ಎಷ್ಟೋ ಜನ ಪುರುಷರು ಅತ್ಯಂತ ಸುಂದರಿಯರಾದ ಪತ್ನಿಯರನ್ನು ಪಡೆದವರು, ಪ್ರೀತಿಸಿ ವಿವಾಹವಾದವರು ಮತ್ತೆ ನಟಿಯೋ, ಚಿತ್ರ ಕಲಾವಿದೆಯೋ, ಗಾಯಕಿಯೋ, ಆಟಗಾರ್ತಿಯೋ ಆಗಿರುವಂಥ ಹೆಣ್ಣನ್ನು ಬಯಸುತ್ತಾರೆ. ಬಹುಶಃ ಪ್ರತಿಭೆಯ ಬಗೆಗಿರುವ ಹಸಿವು, ಆ ಒಂದು ಗಳಿಗೆಯಲ್ಲಾದರೂ ಅವಳ ಪ್ರತಿಭೆ ತನ್ನದಾಗಲಿ ಎಂದು ಬಯಸುತ್ತಾರೋ ಅಥವಾ ಅಂಥ ಸಾಮಾನ್ಯಳಲ್ಲದವಳು ನನ್ನನ್ನು ಸ್ವೀಕರಿಸಿದಳು, ಉಳಿದವರಿಗಿಂತ ತಾನು ಶ್ರೇಷ್ಠ ಎಂಬ ಒಣ ಹೆಮ್ಮೆ ಪ್ರದರ್ಶಿಸಲೋ ಇಲ್ಲ ಇನ್ನಾವುದಕ್ಕೋ ಅವಳ ಸ್ನೇಹ ಅನಿವಾರ್ಯವೆನಿಸುವಷ್ಟು ಕಾತರರಾಗಿರುತ್ತಾರೆ. ಹುಡಿಗೆಯರೂ ಹೆಚ್ಚಾಗಿ ಪ್ರತಿಭಾಶಾಲಿಗಳನ್ನೇ ಮೆಚ್ಚಿಕೊಳ್ಳುವುದಕ್ಕೆ ಇದೇ ಕಾರಣಗಳೇ ಇರಬೇಕು. ಹುಡುಗರು ತಾಯಿಯನ್ನು ಹೋಲುವ ಹುಡಿಗೆಯರಿಂದ ಆಕರ್ಷಿತರಾಗುತ್ತಾರೆ.

ಕೆಲವರು ವಯಸ್ಸಾದಂತೆ ಈ ವಿಷಯದಲ್ಲಿ ತೀರ ಗಾಢಾಸಕ್ತರಾಗುತ್ತಾರೆ. ಈ ಬದುಕಿಗೆ ತಾನಿನ್ನೂ ಉತ್ಸಾಹದಿಂದ ಸ್ಪಂದಿಸಬಲ್ಲೆ ಎಂದು ಈ ಕ್ರಿಯೆಯ ಮೂಲಕ

ತನ್ನ ಚೇತನವನ್ನು ಸ್ಥಾಪಿಸಬಯಸುತ್ತದೆಯೋ ಮನಸ್ಸು ? ಯಾಕೆಂದರೆ ತನ್ನ ಋತು ಶಕ್ತಿ ನಿಲ್ಲುವ ೪೦-೪೫ನೇ ವಯಸ್ಸಿನಲ್ಲಿ ಹೆಣ್ಣು ಮಾನಸಿಕ ಅಸ್ವಸ್ಥತೆಗೆ ಈಡಾಗುವದು ಹಾರ್ಮೋನುಗಳ ರಾಸಾಯನಿಕ ಕ್ರಿಯೆ ಎಷ್ಟು ಕಾರಣವೋ ಅಷ್ಟೇ ಅವಳ ಮನಸ್ಥಿತಿಯೂ ಕಾರಣವಾಗಿರುತ್ತದೆ. ಈ ಬದುಕಿಗೆ ತಾನಿನ್ನು ನಿರುಪಯೋಗಿಯಾದೆ ಎಂಬ ಅನಿಸಿಕೆಯಿಂದಲೇ ತತ್ತರಿಸಿ ಅಸ್ವಸ್ಥರಾಗುವ ಅನೇಕ ಮಹಿಳೆಯರನ್ನು ನಾನು ಕಂಡಿದ್ದೇನೆ. ಅತ್ತೆ ಸೊಸೆಯನ್ನು ಕಾಡಿಸುವುದು ಇದೇ ಹಿನ್ನಲೆಯಿಂದಾಗಿಯೆ ಏನೋ ಮಾವಂದಿರು ಸೊಸೆಯನ್ನು ಕಾಡಿಸಿದ್ದನ್ನು ಹೆಚ್ಚು ಕೇಳಿಲ್ಲ ನಾವು.

ಇಂಥ ಸಾವಿರಾರು ಸಮಸ್ಯೆಗಳನ್ನೊಳಗೊಂಡ ಮಾನವನ ಆಂತರಿಕ ಬಯಕೆಯ ಬಗ್ಗೆ ಎಷ್ಟು ಬರೆದರೂ ಸಾಲದು. ಹೆಣ್ಣುಮಕ್ಕಳು ಈ ಕುರಿತು ಚರ್ಚೆ ಮಾಡಬೇಕು ಅನ್ನುತ್ತಾರೆ ವೆಂಕಟಲಕ್ಷ್ಮಿ ಅವರು. ತೀರ ವೈಯಕ್ತಿಕವಾದ ಈ ಸಮಸ್ಯೆಗೆ ಚರ್ಚೆ ಯಿಂದ ಪರಿಹಾರ ಸಿಕ್ಕೀತೇ ? ಈ ಬಗ್ಗೆ ನಮ್ಮ ಸಮಾಜದ ಮನಸ್ಸು ದೊಡ್ಡದಾಗದೇ ಯಾವುದೂ ಆಗುವುದಿಲ್ಲ. ಹಾಗೆಂದು ಸ್ವೇಚ್ಛಾಚಾರಕ್ಕೆ ಮನ್ನಣೆ ನೀಡಬೇಕೆಂದೇನೂ ಅರ್ಥವಲ್ಲ. ●

## ಸಾದರ ಸ್ವೀಕಾರ

1 **ಹೆಜ್ಜೆಗಳು** (ನಾಟಕ)
ಎಚ್.ಎಸ್. ವೆಂಕಟೇಶಮೂರ್ತಿ
'ರಂಗಸಂಪದ' 233, ವೆಸ್ಟ್ ಆಫ್ ಕಾರ್ಡ್‌ರೋಡ್, ಸೆಕೆಂಡ್‌ಸ್ಟೇಜ್,
ರಾಜಾಜಿನಗರ, ಬೆಂಗಳೂರು-10 ಬೆಲೆ : ರೂ. 6

---

2 **ಕರಾವಳಿಯಲ್ಲಿ ಗಂಗಾಲಗ್ನ.** (ಕವನ ಸಂಕಲನ)
ಕಾಳೇಗೌಡ ನಾಗವಾರ
ಸುಂದರ ಪ್ರಕಾಶನ, ಧಾರವಾಡ-7 ಬೆಲೆ : ರೂ. 7

---

3 **ಪುರುಷನ ಮುಂದೆ** ಮಾಯೆ ಸ್ತ್ರೀಯೆಂಬ (ಕತೆಗಳು)
—ಕೃಷ್ಣ ಮಾಸಡಿ
ಅಕ್ಷರ ಪ್ರಕಾಶನ. ಸಾಗರ, 577401, ಬೆಲೆ : ರೂ. 7

---

4 **ಅನುಸಂಧಾನ** (ಲೇಖನಗಳು)
ನರಹಳ್ಳಿ ಬಾಲಸುಬ್ರಮಣ್ಯ
ಕನ್ನಡ ಸಂಘ, ಶೇಷಾದ್ರಿಪುರಂ ಕಾಲೇಜು,
ಬೆಂಗಳೂರು-20, ಬೆಲೆ : ರೂ. 10

# ಆ ಊರಿನ ಕತೆಯೊಳಗೆ . . . .

—ಕಾಳೇಗೌಡ ನಾಗವಾರ

ಅದಕಳೆದ ಜನವರಿ ತಿಂಗಳ ಕೊನೆಯ ರಾತ್ರಿ. ಹಿಂದಿನ ದಿನದ ಕಾರ್ಯಕ್ರಮ ಕ್ಕಾಗಿ ಜೊತೆಯಲ್ಲಿ ಬಂದಿದ್ದ ಧಾರವಾಡದ ಗೆಳೆಯರು ಮುಂಜಾನೆಯೇ ಕಂಬಿಕಿತ್ತರು. ಉಗುರು-ಬೆಚ್ಚನೆಯ ಹಿತವಾದ ಚಳಿಯ ಕಿರುನಿದ್ದೆಯ ಆಸೆಯಿಂದ ನಾನು ಇನ್ನೂ ಮುಕ್ತನಾಗಿರಲಿಲ್ಲ. ಮಲಗುವ ಮುನ್ನ ಸ್ಥಳೀಯ ಗೆಳೆಯರಿಗೆ ಕೊಟ್ಟ ಮಾತು ಉಳಿಸಿ ಕೊಳ್ಳಲು ರಾಮದುರ್ಗದ ಆ ಪ್ರವಾಸಿಕೋಣೆಯಲ್ಲಿ ನಾನೊಬ್ಬನೇ ಉಳಿದಿದ್ದೆ.

ಸ್ನಾನ, ತಿಂಡಿ, ಚಹಾ ಮುಗಿಸಿ—ಕಿಕ್ಕಿರಿದ ಮಿತ್ರರ ಗಜಬಿಜಿಯನ್ನು ಹಿಂದೆ ತಳ್ಳಿ, ಈಗ ಗೆಳೆಯ ಸಿದ್ದಪ್ಪಹಳ್ಳಿ ಜೊತೆ—ಬೆಳಗಿನ ಒಂಬತ್ತಕ್ಕೇ ಚುರುಗುಡುವ ಬಿಸಿ ಲಲ್ಲಿ ಬೀದಿಗಿಳಿದೆ. ಕೆಲವೇ ಗಜಗಳ ಅಂಚಿನಲ್ಲಿರುವ ಹರಿಜನ ಕೇರಿಯ ತನ್ನ ಪ್ರೀತಿಯ ಹರಿಜನ ವಿದ್ಯಾರ್ಥಿಯ ಮನೆಗೆ ಹಳ್ಳಿಮಾಸ್ತರ ನನ್ನನ್ನು ಕರೆದೊಯ್ಯುತ್ತಿದ್ದರು. ನನ್ನಷ್ಟೇ ಕಪ್ಪಾಗಿದ್ದು, ಮುವ್ವತ್ತರ ಹೊರಸುತ್ತಿನಲ್ಲಿದ್ದ, ಅಲ್ಲೇ ಪಕ್ಕದ ಗ್ರಾಮದವ ರಾದ ಈ ಗಾಣಿಗ-ಲಿಂಗಾಯತ ತರುಣ ಆ ಪ್ರದೇಶದ ಬಡಬಗ್ಗರ ಬವಣೆಯನ್ನೆಲ್ಲ ಅರ್ಥಮಾಡಿಕೊಂಡಿದ್ದ. ಅಲ್ಲಿನ ದೊಡ್ಡ ಪಿಡುಗಾದ ಬಸವಿಯರ ಸ್ಥಿತಿಗತಿಯನ್ನು ವಿವರಿಸಿ, ನನಗೆ ತೋರುವ ಉದ್ದೇಶ ಆತನದಾಗಿತ್ತು.

ಕೇರಿಯ ಒಳಗಡೆಯ ಒಂದು ಗುಡಿಸಲ ಮುಂದೆ ನಿಂತು ಬಾಗಿಲೆಡೆಗೆ ಬಾಗಂತ್ತ ಸಿದ್ದಪ್ಪ "ಸಿ.ಎಚ್. (ಚನ್ನಪ್ಪ ಹನುಮವ್ವ) ಮಾದರ" ಅಂತ ತಮ್ಮ ತರಗತಿಯ ಪರಿ ಭಾಷೆಯಲ್ಲಿ ಸಂಬೋಧಿಸಿ ಕರೆದರು. ಈ ದನಿ ಕೇಳಿದ ಕೂಡಲೇ "ಓರೀ–ಸರ" ಅಂತ ಒಳಭಾಗದಿಂದ ಪ್ರತಿಧ್ವನಿ ಕೇಳಿಸಿತು. ಅದರೊಡನೆಯೇ ದಪ್ಪ-ಪುಷ್ಪ-ಮೈಕಟ್ಟಿನ ಹದಿನಾರರ ಹುಡುಗ ಪ್ರತ್ಯಕ್ಷನಾದ. ತರಾತುರಿಯಲ್ಲಿ ಹಾರಿ ಹೊರಗೆ ಬಂದಿದ್ದ ಆತನ ಮೈಮೇಲೆ ಬಿಗಿಯಾಗಿ ತೊಡೆಬುಡಕ್ಕೆ ಅಂಟಿಕೊಂಡಿದ್ದ ಚಿಕ್ಕನಿಕ್ಕರಿನ ಹೊರತು ಮತ್ತೇನೂ ಇರಲಿಲ್ಲ. ಆತ ನಾಚಿ ಷರ್ಟು ತೊಡುವ, ಟವೆಲ್ ಹೊದೆವ, ನಮ್ಮನ್ನು ಒಳಕ್ಕೆ ಕರೆದು ಆಹ್ವಾನಿಸುವ-ಗುಂಪು ಯೋಚನೆಗಳ ಗಡಿಬಿಡಿಯಲ್ಲಿದ್ದ.

ನಾವು ಒಳಹೊಕ್ಕೆವು. ಎಡಭಾಗದಲ್ಲಿ ಎಮ್ಮೆಗಳನ್ನು ಕಟ್ಟುವ ಜಾಗ, ಅವರ ಮಗ್ಗುಲಿಗೆ ಅಡಿಗೆಯ ಒಲೆ, ಕೆಲವು ಪಾತ್ರೆಗಳು ; ಒಂದು ಹಗ್ಗದ ಮಂಚ ; ಒಂದೆ ಡು

ಬಟ್ಟೆಗಳು-ಅಷ್ಟೇ ಅಲ್ಲಿನ ಸಂಪತ್ತು. ಚನ್ನಪ್ಪ ಚಾಪೆ ಹಾಸಿ, ಷರ್ಟ್ ತೊಟ್ಟು ಕುತೂಹಲದಲ್ಲಿ ಕಾದು ನಿಂತ; ಅವ್ವ ಮತ್ತು ಅಕ್ಕ ಧಣೇರ ಮನೆಗೆ ಮುಂಜಾನೆಯೇ ಸಗಣಿ ಬಾಚಲು ಹೋದವರು ಇನ್ನೂ ಬಂದಿರಲಿಲ್ಲ. ಈಗ ಬರುವ ಸಮಯ-ಅಂದ. ಹಳ್ಳಿ ತಮ್ಮ 'ತಲಿ' ಒಡಿಸುತ್ತಾ 'ಇವರು ನಿಮ್ಮವರೇ–ಬೆಂಗಳೂರು ಕಡೇ ಮಂದಿ. ನಿಮ್ಮನ್ನೆಲ್ಲ ಕಾಣಲು ಬಂದವರೆ ತಮ್ಮ....' ಅಂತೆಲ್ಲ ಶುರುಮಾಡಿದರು. ಕೂಡಲೇ ನನ್ನ ಕಡೆಗೆ ತಿರುಗಿ 'ಈ ಚನ್ನಪ್ಪ ಒಂಬತ್ತನೇ ಇಯತ್ತೆಯಲ್ಲಿ ಪಾಠದಲ್ಲೂ ಈತನೇ ಮುಂದು; ಕಬಡ್ಡಿ ಕ್ಯಾಪ್ಟನ್' ಅಂತ ಪರಿಚಯಿಸಿದರು. ಹುಡುಗ ಗೆಲುವಿನಿಂದ ಮಿಂಚಿ ತಬ್ಬಿಬ್ಬಾದ. ಹಿಂದಿನ ದಿನದ ಸಂಜೆಯ ಸಭೆಯಲ್ಲಿ ಆತ ನನ್ನನ್ನು ಕಂಡ ಬಗ್ಗೆ ಹೇಳಿದ.

ಮತ್ತರ್ಧ ತಾಸು ಬಿಟ್ಟು ಬರುವುದಾಗಿ ಹೇಳಿ ಗುಡಿಸಲಿಂದ ಹೊರಬಂದಾಗ-ಚನ್ನಪ್ಪ ಕಾಲನಿಯ ಒಳಭಾಗಗಳನ್ನು ತೋರಿಸಿದ. ಆಡುವ ಮಕ್ಕಳು, ಮುದುಕರು ಮತ್ತು ತೆಪ್ಪಗೆ ತಮ್ಮ ಕೆಲಸಕಾರ್ಯಗಳಲ್ಲಿ ನಿರತರಾದ ಹೆಂಗಸರನ್ನು ಹಿಂದಿಕ್ಕಿ ರಸ್ತೆಗಿಳಿದೆವು. ಚನ್ನಪ್ಪನ ಸಹಪಾಠಿ ಸಿಕ್ಕಿ ಮಾಸ್ತರಿಗೆ ನಮಸ್ಕರಿಸಿದ. ಒಳ್ಳೆಯ ಷರ್ಟ್ ಪ್ಯಾಂಟು ತೊಟ್ಟು ಕುಡಿಮೀಸೆ ಬಿಟ್ಟಿದ್ದ ಆತ ಧಣಿಯ ಮಗ. ಆ ರೆಡ್ಡಿ-ಬಾಲಕ ತಮ್ಮ ಮನೆಯಲ್ಲೇ ದುಡಿಯುವ ಹನುಮಪ್ಪ ಮತ್ತು ಆಕೆಯ ಮಗಳು ಶಾಂತಪ್ಪನ ಬಗ್ಗೆ ಸಾಕಷ್ಟು ವಿವರ ನೀಡಿದ. ಜೊತೆಗೆ ಎದುರಿಗೆ ಹಾದು ಹೋಗುತ್ತಿದ್ದ ವ್ಯಕ್ತಿಯೊಂದರ ಕಡಗೆ ಕೈಮಾಡಿ ತೋರಿಸಿ—"ಅತನೇರಿ ಸರ, ಚನ್ನಪ್ಪನ ಕಾಕಾ" ಅಂತ ಹೇಳಿ ತನ್ನ ದಾರಿ ಹಿಡಿದ. ಮಾಸ್ತರ ತುಂಬಾ ವಿನೀತನಾಗಿ ಆತನನ್ನು ಕರೆತಂದರು. ಆ ಕಡೆಯ ಕಚ್ಚೆ ಮತ್ತು ಒಳಬನೀನ್ ಅಷ್ಟೇ ತೊಟ್ಟು, ತನ್ನ ಭಗತ್ ಮೀಸೆ ತಿರುವಿ, ಬೀಡಿ ಸೇದುತ್ತಾ ನಲವತ್ತರ ವಯಸ್ಸಿನ ಆ ಖುಷಿಯ ಮನುಷ್ಯ-ಸಂತೆ ದಿನದ ತನ್ನ ಹಮಾಲಿ ಕೆಲಸಕ್ಕೆ ಹೊರಟಿದ್ದ. ಎದುರಿನ ಹೋಟೆಲಿನ ಮೂಲೆಯಲ್ಲಿ ಬಿಡುವಾಗಿ ಕೂತು ಚಹಾಕುಡಿದು ಹರಟೆಗಿಳಿದೆವು. ದಿನಕ್ಕೆ ಹತ್ತರಿಂದ ಹದಿನೈದು ರೂಪಾಯಿ ಕೂಲಿ ಹುಟ್ಟುವ ತನ್ನ ಕಾರ್ಯದ ಬಗ್ಗೆ 'ಮೀಸೆ' ವಿವರಿಸಿದ. ನಮ್ಮ ಮತ್ತು ಆತನ ನಡುವೆ ಆತ್ಮೀಯತೆ ಮೊಳೆಯತೊಡಗಿತು. ಕಳೆದ ಹತ್ತಾರು ವರ್ಷಗಳಿಂದಲೂ ಹರಿಜನ ಕೇರಿಯ ಬಸವಿ ಹನುಮವ್ವನ ಮನೆಯಲ್ಲೇ ತಾವು ಗಂಡ-ಹೆಂಡಿರ ಬಾಳ್ವೆ ನಡೆಸುತ್ತಿರುವುದನ್ನು ತಿಳಿಸಿದ. ಆತ ಸಹ ತನ್ನಂತೆಯೇ ಗಾಣಿಗನೆಂಬುದು ಗೊತ್ತಾಗುತ್ತಿದ್ದಂತೆ ಸಿದ್ದಪ್ಪ ಸೋಜಿಗದಿಂದ ಥಟ್ಟನೆ ಅವನೊಡನೆ ಏಕವಚನಕ್ಕಿಳಿದರು. ಊರು, ಕೇರಿ ಮತ್ತು ನೆಂಟರಿಷ್ಟರ ಬಗ್ಗೆ ಅವರಿಬ್ಬರೂ ಮಾತಾಡಿಕೊಂಡರು. ನನ್ನ ಮುಖದ ಕಡೆಗೆ ಆ ಮೀಸೆಯು ನಿಧಾನಕ್ಕೆ ಕಣ್ಣಾಡಿಸುತ್ತಾ-ಹರಿಜನನ್ನೆನುವ ಕನಿಕರದ-ಪ್ರೀತಿಯ ಧಾಟಿಯಲ್ಲಿ ಹತ್ತಿರವಾಗತೊಡಗಿದ.

ಜನವೇ ಕಾಣದ ಆ ಹೋಟೆಲಿನ ಇನ್ನೊಂದು ಮೂಲೆಯಲ್ಲಿ ಚಿಕ್ಕವಯಸ್ಸಿನ ತೆಳು ಬಿಳಿಯ ಬಣ್ಣದ ಹೆಂಗಸೊಬ್ಬಳು ಟೀ ಕುಡಿಯುತ್ತಿದ್ದಳು. ಹಳ್ಳಿ ಮತ್ತು ಮೊಸೆ ಆಕೆಯ 'ಲಾಜಿಂಗ್ ದಂದೆ' ಬಗ್ಗೆ ಹೇಳಿದರು. ಹಳ್ಳಿ ಆಕೆಯ ಹತ್ತಿರ ಹೋಗಿ "ಅಕ್ಕಾ ಪ್ರೆ ಇಲ್ಲಿ ಸ್ವಲ್ಪ ಬರ್ರಿ" ಅಂತ. ಬಂದಳು. ನಾವೆಲ್ಲ ಪಕ್ಕದ ಮೆಟ್ಟಿಲು ಹತ್ತಿ ಮಹಡಿಯ ಒಂದು ಖಾಲಿಕೋಣೆಯಲ್ಲಿ ಕೂತೆವು. ಆಕೆ ಮುಖ, ಕಣ್ಣು ಮುಚ್ಚಿಕೊಳ್ಳುತ್ತಾ ತಡೆದು ತಡೆದು ಮಾತಾಡಿದಳು. ತಿಂಗಳ ಹಿಂದೆ ಗಂಡ ಬಿಟ್ಟಿರುವ ಹತ್ತಿರದ ಹಳ್ಳಿಯ ಕುರುಬರಹೆಣ್ಣು ಆಕೆ: ಬೇರೊಬ್ಬಳಲ್ಲಿ ಆಸಕ್ತನಾಗಿದ್ದ ಗಂಡ ಎರಡು ವರ್ಷ ಸಂಸಾರ ನಡೆಸಿ ಹೊರದೂಡಿದ್ದ. ಅವನ ಬಗ್ಗೆ ಆಕೆಗೆ ಸಿಟ್ಟಿರಲಿಲ್ಲ. ನಂಬಿಕೆಯಿಂದ ಒಟ್ಟಿಗೆ ಇಟ್ಟುಕೊಳ್ಳುವವನಿಗಾಗಿ ಆಕೆ ಕಾಯುತ್ತಿದ್ದಳು. ನಾಟಕದ ಕಂಪೆನಿ ಸೇರಲು ಯತ್ನಿಸಿ ಸೋತಿದ್ದಳು........

ಹಿಂದಿರುಗಿ ಬರುವಾಗ ಮಧ್ಯವಯಸ್ಸಿನ ಪ್ರಶಾಂತ ಹೆಂಗಸೊಂದು ಮೆಟ್ಟಿಲುಗಳ ಪಕ್ಕದ ಬಿಸಿಲಲ್ಲಿ ಕೂತು, ಸ್ನಾನ ಮಾಡಿದ ತನ್ನ ತಲೆಯೊಣಗಿಸುತ್ತಿದ್ದಳು. ಹಳ್ಳಿ ಹತ್ತಿರ ಬಂದು "ಇವಳು ಈ ಹೋಟೆಲ ಮಾಲಕನ ಪ್ರೇಯಸಿ.... ಈಕೆಯ ಮಗನೂ ನನ್ನ ವಿದ್ಯಾರ್ಥಿ" ಎಂದು ಕಿವಿಯಲ್ಲಿ ಪಿಸುಗುಟ್ಟಿದರು.

ಮಗಳು ಶಾಂತವ್ವನನ್ನು ಸಹ ಮನೆತನದ ಪದ್ಧತಿಯಂತೆ 'ಸೂಳೆ' ಬಿಟ್ಟಿರುವ ವಿಷಯವನ್ನು ಮೊಸೆ ದಾರಿಯಲ್ಲಿ ಒಪ್ಪಿಕೊಂಡ. ತನಗಿಂತ ನಾಲ್ಕಾರು ವರ್ಷಗಳು ಹಿರಿಯಳಾದ ಹನುಮವ್ವನನ್ನು ತಾನು ಕೂಡಿಕೊಂಡಾಗ ಶಾಂತವ್ವ ಮತ್ತು ಚನ್ನಪ್ಪ ಚಿಕ್ಕಮಕ್ಕಳಾಗಿದ್ದರು. ಅವೂ ಸಹ ತಾಯಿಲ್ಲದ ಮಕ್ಕಳು; ಹನುಮವ್ವ ತಾನೇ ಸಾಕಿ ಹೆಸರಿಟ್ಟು ಬೆಳೆಸಿದಳು. ಒಂದು ಕಾಲದ ತನ್ನ ಕೈಗೂಸಾಗಿದ್ದ ಶಾಂತವ್ವ ಈಗ ನಡೆಸಬಹುದಾದ 'ಸೂಳೆ' ದಂಧೆ ತನ್ನ ಕಣ್ಣಿಗಂತೂ ಬೀಳುವಂತಿಲ್ಲ...ಎಂದೆಲ್ಲ ಆತ ವಿವರಿಸಿದ.

ಮೊಸೆಯ ಜೊತೆಯಲ್ಲಿ ಮತ್ತೆ ಹನುಮವ್ವನ ಗುಡಿಸಲಿಗೆ ಬಂದೆವು. ಚಾಪೆಯ ಮೇಲೆ ಹೊಡೆಯುವ ರಗ್ಗು ಹಾಸಿ, ಆತನೇ ಖುದ್ದಾಗಿ ನಿಂತು ಸತ್ಕರಿಸಿದ. ಎದುರಿಗೆ ಹನುಮವ್ವ ಮತ್ತು ಶಾಂತವ್ವ ಒಲೆ ಹಚ್ಚಿ. ರೊಟ್ಟಿ ಹಾಗೂ ಚಹಾದ ಸಿದ್ಧತೆ ನಡೆಸಿದ್ದರು. ಪರಸ್ಪರ ಪರಿಚಯದ ನಡುವೆ ಚಹಾ ಸೇವನೆಯಾಯಿತು. ಹನುಮವ್ವ ಆಗಲೇ ಬಾಳೆಹಣ್ಣು ಮತ್ತು ಬಿಸ್ಕತ್ತು ಕೂಡ ತರಿಸಿದ್ದಳು. ಮೊಸೆ ಮತ್ತು ಚನ್ನಪ್ಪ ಶಾಂತಮ್ಮ ಕೆಲಸಕಾರ್ಯಗಳಿಗೆ ತೆರಳಿದ್ದರು.

ಇಪ್ಪತ್ತೈದರ ಹರೆಯದ ಶಾಂತವ್ವ, ಆಗಾಗ್ಗೆ ಕದ್ದುನೋಡುತ್ತ, ನಾಚುತ್ತ, ನಮಗೆ ಬೆನ್ನು ಮಾಡಿ ರೊಟ್ಟಿ ಸುಡುತ್ತಿದ್ದಳು. ನಮ್ಮ ಪಕ್ಕ ಹನುಮವ್ವ ನಿರಾಳ

ಕೂತು ಮಾತಾಡುತ್ತ, ನೆನಪಿನ ಗಣಿ ಹೊಕ್ಕಿದ್ದಳು : 'ಮೊಸ' ಮತ್ತು ತನ್ನ ಮೊದಲ ಗೆಣೆತನದ ಚಿತ್ರ ನೀಡುವಾಗ ಎಳೆಸುಡುಗಿಯಂತೆ ರಂಗೇರಿದಳು. ಶಾಂತವ್ವ ದೊಡ್ಡಾಕಿ ಯಾಗುತ್ತಿದ್ದಂತೆ ಜಡ್ಡಾಗಿ ತಿಂಗಳು ಗಟ್ಟಲೆ ಮಲಗಿದ್ದು ; ಕೊನೆಗೆ ಸವದತ್ತಿ ಎಲ್ಲಮ್ಮ ನಿಗೆ ಹರಕೆ ಹೊತ್ತು, ಬಸವಿ ಬಿಟ್ಟ ಮೇಲೆ ಆವಳಿಗೆ ಗುಣವಾದ್ದು ಎಲ್ಲಾ ಹೇಳಿ, ತಾ ಮಾಡಿದ್ದೆಲ್ಲ ಪ್ರಬಲವಾಗಿ ಸಮರ್ಥಿಸಿಕೊಂಡಳು.

ಶಾಂತವ್ವಗೆ ಮಕ್ಕಳಿಲ್ಲ. ಈ ಹೊತ್ತಿಗೆ ನಮ್ಮೊಡನೆ ಮಾತಾಡುವ ಸಲಿಗೆ ಅವಳಲ್ಲಿ ಮೊಳೆಯುತ್ತಿತ್ತು. ತನ್ನ ಹೊಟ್ಟೆಯಲ್ಲಿ ಹೆಣ್ಣು ಹುಟ್ಟಿದರೆ ತಾನು ಆ ಮಗ್ನ ವನ್ನು ಮುಂದೆ ಬಸವಿಯನ್ನಾಗಿಸದೆ, ಮದುವೆ ಮಾಡುವುದಾಗಿ ಆಕೆ ಹೇಳಿದಳು.

ಎದುರಿಗೆ ಮೈದಾನದಲ್ಲಿ ಆಟವಾಡಿಕೊಳ್ಳುತ್ತಿದ್ದ ಚನ್ನಪ್ಪ ಬೆವರುತ್ತಲೇ ಓಡಿ ಬಂದು ಗಟ ಗಟ ನೀರು ಕುಡಿದು ಮತ್ತೆ ಓಡಿದ : ಈತನನ್ನು ಕೊನೆತನಕ ಚೆನ್ನಾಗಿ ಓದಿಸಬೇಕೆಂದು ಹೇಳಿದೆ. 'ಬೆಂಗಳೂರಿಗೆ ಕಳಿಸುತ್ತೀರಾ ?' ಅಂದಾಗ ಅವ್ವ, ಅಕ್ಕ ಕಣ್ಣರಳಿಸಿದರು. 'ಅವನನ್ನು ಹೇಗೆ ಬಿಟ್ಟಿರುವುದು' ಅಂತ ಹನುಮವ್ವ ಬೆರಗಾದಳು ; ತಿನ್ನಲು ರೊಟ್ಟಿ ಕೊಟ್ಟಳು ; ಕತೆ ಹೇಳಿದಳು. ಹೊರಬರುವಾಗ 'ಚೆನ್ನಪ್ಪನಿಗೆ ನೀವೇ ದಿಕ್ಕು' ಅಂತ ಮಾಸ್ತರರ ಕಾಲಿಗೆ ಬೀಳಲು ಯತ್ನಿಸಿದಳು. 'ನೀವು ಹಿರೇರು, ನಾವು ನಿಮ್ಮ ಕಾಲಿಗೆ ಬೀಳಬೇಕು' ಅಂತ ಹಳ್ಳಿ ಗದ್ಗದಿತರಾದರು. ಶಾಂತವ್ವ ಮೃದುವಾಗಿ ನಕ್ಕಳು.

ಪಕ್ಕದ ಪುಟಾಣಿ ಗುಡಿಸಲಿಗೆ ಹನುಮವ್ವ ನಮ್ಮನ್ನು ಕರೆತಂದಳು. ಅದು ಬಸವಿಯ ಕೋಣೆ ; ಯಾವುದೇ ಕೊಳೆ ಕಸ ಕಾಣದಂತೆ ಅಚ್ಚುಕಟ್ಟಾಗಿತ್ತು ; ಅಲ್ಲಿ ಒಂದು ಚಾಪೆ ಮಾತ್ರ ಹಾಸಲ್ಪಟ್ಟಿತ್ತು.

ಈಚೆಗೆ ತಲೆ ಇಟ್ಟಾಗ ರಾಮದುರ್ಗದ ಬಿಸಿಲು ರಾಚುತ್ತಿತ್ತು. ಹೆಂಡತಿಯನ್ನು ಬೆಂಕಿಯಲ್ಲಿ ಸುಟ್ಟು, ಆಕೆ ತುಂಬು ಗರ್ಭಿಣಿಯಾಗಿದ್ದಾಗ ಕಾಡಿಗಟ್ಟಿ ವಿನಾಕಾರಣ ಮತ್ತೆ ಮತ್ತೆ ಪರೀಕ್ಷಿಸಲು, ಶಿಕ್ಷಿಸಲು ನಿಂತ ಆ ಅಯೋಧ್ಯಾ ರಾಮ ನೆನಪಾದ. ಜೊತೆಯಲ್ಲಿಯೆ ಹೆತ್ತವ್ವನ ಕತ್ತು ಕತ್ತರಿಸಿದ ಮಗ ಕೊಡಲಿಯ ರಾಮ ನೆನಪಾದ. ಅವರ ವರ್ತನೆಯ ಯಾವ್ಯಾವ ಅಂಶಗಳನ್ನು ಈ ಕಾಲದ ಗಂಡಸರು ಕೂಡ ಮತ್ಯಾವ ರೂಪಗಳಲ್ಲಿ ಅಳ ವಡಿಸಿಕೊಂಡಿದ್ದೇವೆಂದು ಯೋಚಿಸತೊಡಗಿದೆ. ಗಂಧವತಿ ಪೃಥ್ವಿಯ ಹಾಗೆ ಯಾವತ್ತೂ ಅರಳುವ, ಬೆಳೆಯುವ, ಕಟ್ಟುವ ಶಕ್ತಿಯ ಪ್ರತಿರೂಪವಾದ ಹೆಣ್ಣನ್ನು ಈ ಶುಷ್ಕ ಗಂಡು ಎಷ್ಟೆಲ್ಲ ಬಗೆಗಳಲ್ಲಿ ಕಡೆಗಣಿಸಿದ್ದಾನಲ್ಲ-ಎನ್ನುವ ಆತಂಕದಲ್ಲಿ ನಾನು ನರಳಿದೆ. ●

# ನಾನು-ಸಿಗರೇಟು-ನೀನು

ಹಚ್ಚುವ ಪ್ರತಿದಿನದ ಸಿಗರೇಟಿನ ಜೊತೆಗೆ
ಭೂತದಂತೆ ಮೇಲೇಳುವ ನಿನ್ನ ನೆನಪು
ದಿನದ, ನನ್ನ ಹೆಚ್ಚು ಸಮಯವನ್ನು ನಿನ್ನದಾಗಿಸಿಕೊಳ್ಳುತ್ತಿರುವುದಕ್ಕೆ
ಇಂದಿಗೂ ಆಶ್ಚರ್ಯಪಡುತ್ತಿದ್ದೇನೆ.
ಕುಳಿತಲ್ಲಿ ಕುಳ್ಳಿರಿಸಲಾರದೆ, ಸುಮ್ಮನೆ ಹಿಂಸಿಸಿ
ದಿನ ದಿನವೂ ನಿಧಾನವಾಗಿ ಕೊಲ್ಲುವ ನಿನ್ನ ನೆನಪ
ವಿಷ ಗುಳಿಗೆಗಳು ದೇಹದ ತುಂಬೆಲ್ಲಾ
ಪ್ರಭಾವ ಬೀರುತ್ತಿರುವುದು ಅಸಂಭವವಾದರೂ
ಎದುರಿಸದೇ ಜಡವಾಗಿದ್ದೇನೆ, ನಿನ್ನ ನೆನಪ
ಇಳಕ್ಕೆ ಬಲಿಯಾಗುತ್ತಿದ್ದೇನೆ.

ಸುತ್ತ ಸುಳಿವ ಸಮಸ್ಯೆಗಳ ಜೂಟಾಟದಲ್ಲಿ ಸಿಕ್ಕಿ
ತರಗೆಲೆಯಂತೆ ನುಡುಗಿದ ನನ್ನ ಕಂಡು
ಅತಿ ಅತಿಯಾಗಿ ಅಳಿಸಿ, ದೂರ ಸರಿದರೂ
ನನ್ನಿಂದ ಇಂದಿಗೂ ನಿನ್ನ ಕೀಳಲಾಗುತ್ತಿಲ್ಲ
ಎಂಥ ಗಟ್ಟಿ ಬೇರು ನೀನು !

"ಸನ್ಯಾಸಿಯಾಗಿರ್ತಿಯೇನೋ ಮಗನೆ"! ಎಂದು ಛೇಡಿಸುತ್ತ ನಗುವ
ಗೆಳೆಯರ ಬಾಯಿಗಳಿಗೆ ಆಹಾರವಾಗುತ್ತಾ
ನಿನ್ನಿರವ ಹುಡುಕಾಟದಲ್ಲೇ ಜೀವ ಕೊರೆದುಕೊಳ್ಳುವಾಗ
ಮೊನ್ನೆ ಧಿಡೀರನೆ ನಿನ್ನವರೊಂದಿಗೆ ನಿನ್ನ ಕಂಡಾಗ
ಶಿಥಿಲವಾದ ಭಾವ ಶೂನ್ಯ ಮಿದುಳಿಗೆ

ಆ ಘಳಿಗೆ ಏನನ್ನಿಸದಿದ್ದರೂ ಎಳೆದ ದಂಮಿಗೆ
ನೆತ್ತಿ ಹತ್ತಿದಂತಾಗಿ
ಕಣ್ಣಲ್ಲಿ ನೀರುಕ್ಕಿ ಬಂದಾಗ, ಕಂಡಿತ್ತು ಎದೆಯ ಮೂಲೆಯಲ್ಲೊಂದು
ನೋವ ಛಳಕು"

ಬೋಳು ಬಂಡೆಯಷ್ಟೇ ಬೆತ್ತಲಾದ ವಾಸ್ತವಿಕತೆಯೆದರು
ನೆನಪು ಹೃದಯ ತುಂಬಿ ಬಿಗಿಯಾದಂತೆನಿಸಿದಾಗ
ಮೂಲೆ ಮೂಲೆಯಿಂದಲೂ ಸಿಡಿದೇಳುತ್ತವೆ
ನೋವ ನೂರು ಬಿಸಿಲುಗಳು
ಭೂತ ವರ್ತಮಾನಗಳ ಸಿಕ್ಕುಗಳಲ್ಲಿ ನಿನ್ನ ನೆನಪುಗಳೊಡನೆ
ಒದ್ದಾಡುವ ನನ್ನನ್ನು ಪ್ರಜ್ಞೆ ಬಡಿದೆಬ್ಬಿಸಿದಾಗ
ದೂರದಲ್ಲಿ ಬರುವ ಬಸ್ ಕಂಡು ಹತ್ತುವ
ಆತುರಕ್ಕೆ ರಭಸವಾಗಿ ಕೆಳಬಿದ್ದು
ನೆಲಕಚ್ಚುತ್ತದೆ
ಕಡಿದ ನೆನಪಿನ
ಉರಿವ
ಸಿಗರೇಟು

—ಕೆ.ಎನ್. ಶಶಿಪ್ರಭಾ

# ತಣ್ಣನೆಯ ನೆಲಕ್ಕೆ

ಈ ನೆಲದ ಮಣ್ಣಲ್ಲಿ ಹುದುಗಿರುವ ಬೀಜಗಳ
ಹೊರತೆಗೆದು ಪುಟ್ಟವಿಟ್ಟಿಟ್ಟು ಪರೀಕ್ಷೆಗೊಳಪಡಿಸಿ
ಕಪ್ಪು ನೆಲದಲ್ಲಿ ಹದವಾದ ಮಳೆಯಲ್ಲಿ ಹದ
ಗೆಡಲು ಕಾರಣಗಳ ಬೆದಕಿ ಬೆದಕಿ ಬಯಲು
ಮಾಡಬೇಕೆನಿಸಿದೆ. ತನ್ನ ಬಿತ್ತನೆಯ ಫಸಲ
ತೊಂಡುದನಗಳು ಬಂದುಂಡು ನಡೆದಾಗ
ಕುಳಿತಲ್ಲೆ ವಟಗುಟ್ಟುವ ಷಂಡತನದ ಬೇರ
ಬೇರು ಸಹಿತ ಕಿತ್ತು ಬಿಸಿಲಿಗಿಡಬೇಕೆನಿಸಿದೆ.

ದಿಲ್ಲಿಯಲ್ಲಿರುವವರ ಮಾತು ; ಸೌಧದೊಳಗಿನ—
ವರ ಕತೆ ; ಪತ್ರಿಕೆಗಳ ಮುಖಪುಟ-ಈ ಮೂರರ
ಮುಖದ ಮೇಲೆ ಸಗಣಿ ಬಗ್ಗಡರಾಚಿ
ಕೆಂಪುರಕ್ತದಲವರ ಅದ್ದಬೇಕೆನಿಸಿದೆ.

ಕೋಟಿ ಕೋಟಿ ಪುಣ್ಯಕೋಟಿಗಳು ಬದುಕುಳಿಯಲು
ವ್ಯಾಘ್ರಗಳು ಹಲವು ಬಲಿಯಾದರೆ ತಪ್ಪೇನು ?

—ಕೆ.ಎಂ. ಮುನಿಕೃಷ್ಣಪ್ಪ

# ಧ್ವನಿಯೊಳಗಿನ ಮಾತು

ಒತ್ತಡದ ದನಿ ಅಬ್ಬರಿಸುವುದಿಲ್ಲ, ಒಳಗಿನ ಕೊರಗು ಕೂಗಿ-
ದರೆ ಸೊರಗಿ ಕ್ಷಯಿಸುವುದು ; ಬಿಸಿಲು ಚಿಲುಮೆಯ ಹಾಗೆ
ಬತ್ತದ ನೋವು, ನಿಲ್ಲದೆ ಹರಿವ ಮುಲುಕು ಎಚ್ಚರದಿರವು
ಹತ್ತಿರ ಬಿಗಿ ಮೌನಕ್ಕೆ ಮಾತಿನ ಲಘು ಕಟ್ಟುವೆ ಹಾಗೆ
ಮತ್ತೆ ಕೆಡವಿದ ಗೂಡ ನಾಡ ಹಕ್ಕಿ.

ಶಬ್ದದ ಶಿಸ್ತು ಮನಸು ಕೂಡದ ಹಾಗೆ, ಮಾಯದ ಗಾಯ ಭಂಗಿ-
ಹೊಗೆಯಲಿ ನೆನಪು. ಚರ್ಮ ಕೂಡಿದ ಹೊಲಿಗೆ ನಂಜಿಗೆ ಕೀವಿನ ಗಡ್ಡೆ
ಯೊಡೆಯದ ನೋವು ; ಕನಿಷ್ಟ ಕಾಕಸಸ್ಸಿನ ಹಾಗೆ ಬೆಳೆದು ನುಂಗುವ ಭೀತಿ
ಕ್ಯಾನ್ಸರಿನ ಗತಿಯೋ ಹಾಗೆ ಎದೆಯುಡಿಗೆ ಪೈಸಾದಗಲ
ಕ್ಷಕಿರಣ ಕಂಡದ್ದು ಶರಮಂಚಕ್ಕೆ ಎಳೆದು ಇಚ್ಛಾ
ಮರಣದ ಕನವರಿಕೆ ಹಗಲೆಲ್ಲ

ಆಕ್ರೋಶದ ನೀತಿಯೋ ಅಲ್ಪ ಜೀವದ್ದು ಸತ್ಯ; ಮನಸ್ಸಿನ ಮಾತು
ಮೃದುವಾದದ್ದು, ನಾಜೋಕು ನಕಲಿಗೆ ಪ್ರತಿಯಲ್ಲ
ಕನ್ನಡಿ ವಕ್ರರೇಖೆಯ ಗರಡಿ ಸಾಮುಲಯಕ್ಕೆ :
ಭಸ್ಮದಿಂದೇಳೋ ರಾಕ್ಷಸ ಹಕ್ಕಿ ರೆಕ್ಕೆ ಕಟ್ಟಿದ ಸುಳ್ಳು ಹುದಲಿನೊಳಗೆ

ಪತರುಗುಟ್ಟುವ ಶಬ್ದ ಸರ್ಬೆರಸ್ಸಿನ ಬೊಗಳು ದೂರ
ಇಲ್ಲಿಗೆ ಕೇಳುವುದು
ಮೆಲ್ಲಗೆ-

ಹಾರಬಿಡದಿರು ನಿನ್ನ ಮಾತುಗಳ ಬೆಲೆ–
ಕಟ್ಟಲಾರದವು ಕಿವಿಯಿಂದ ಕಿವಿದಾಟಿಯಾವು ; ಎದುರು ಪಾಳಯದ
ಶಂಖವನು ಸ್ವಲ್ಪವು ಬಿಡದೆ ಕಿವಿಗೊಟ್ಟು ಕೇಳು, ಗುಣಿಸು, ಭಾಗಿಸು ತುಟಿ
ತೆರೆಯದೆಯೆ ಆಡು ನಿನ್ನೊಳಗೆಯೆ ಒಳಗೆಯೇ
ಒಳಗಿನ ನಿನ್ನದೇ ಮಾತು.

—ಪುರುಷೋತ್ತಮ

# ಕೊಳ್ಳಲಾಗದ ನೆಲ

ಖಾಲಿ ನೆಲಕ್ಕೆ ಇಷ್ಟು ಬೆಲೆಯೇ ?
ನನ್ನಂಥವರು ಕೊಳ್ಳಲಾಗದ ನೆಲವಿದು.
ಈ ನೆಲಕ್ಕೆ ಬೆಲೆ ಕಟ್ಟುವವರು
ನಾನು–ನೀವಲ್ಲ ;
ದಲ್ಲಾಳಿಗಳು.
ಒಂದಕ್ಕೆ ಎರಡು
ಎರಡಕ್ಕೆ ನಾಲ್ಕು
ಬಂದಷ್ಟೇ ಗಂಟು
ಅವರಪ್ಪ ಬಸಿದ ನೆತ್ತರಿಲ್ಲಿಲ್ಲವಲ್ಲ !

ಕಾಸಿಗೆ ಕಾಸು ಕೂಡಿಸಿ
ಬಡ್ಡಿಗೆ ಬಡ್ಡಿ ಬಿಗಿದು
ಸತ್ತವರ ತೊಗಲ ಹರಿದು
ಕಳ್ಳಸಂತೆಯಲಿ ಮುಂಚಿ ಮಾರಿ
ಮಹಡಿ ಕಟ್ಟಿದ ಮಹಾನುಭಾವರ

ಜಳಕಾ ಮಾಡಿದರ
ಉಂಡ
ಮುಸರಿ ನೀರ ಚೆಲ್ಲಿದರ
ಕೆಳಗ
ನಮ್ಮ ಮನಿ ಸುತ್ತೂ ಕಡೆ
ಗಲೀಜು ;
ಅವರಿಗೆ ಮಾತ್ರ ಇದು
ಮೋಜು.
ಹೇಳಿದರ-ನಾವೇನ ಮಾಡೂಣು ?
ಅಂತ ಟಬರ ಮಾಡತಾರ.
"ನೀವೂ ಮಾಡಿರಿ ; ನಿಮಗೂ
ಮಾಡಾಕ ಯಾರ ಬ್ಯಾಡಂತಾರ ?"
ಅಂತ ಕೇಳತಾರ
ಮ್ಯಾಗಿನವರು
ಮಾಡೂ ಗಲೀಜಿನ ಕೂಡ
ನಾವೂ ಗಲೀಜ ಮಾಡಿಕೊಂಡ
ಕೆಳಗ ಕೊಳೀಬೇಕ ?-
ಅಂತ ವಿಚಾರಾ
ಮಾಡಿದರ ತಲೀನ ತಿರಗತತಿ.
ಅವರನೂ ಒಮ್ಮೆ ಕೆಳಗಿಟ್ಟ
ನಾವು ಮ್ಯಾಗ ಹತ್ತಿದರ ತಾನ
ತಿಳೀತತಿ
ಒಂದಿನಾ ಒದ್ದು
ಅಟ್ಟ್ಯಾನ ಕೆಡವಿದರ ಜಕ್ಕಸ್ತ
ನಮ್ಮ ಕೂಡ ಭೂಮಿ ಮ್ಯಾಗ
ಬಿದ್ದಿರತಾರ.
ಗಲೀಜ ಮಾಡಿ ನಮಗ
ಕಾಟಾ ಕೊಡೂದೂ
ಬಿಟ್ಟಿರತಾರ.

—ಧರಣೇಂದ್ರ ಕುರಕುರಿ

ಪುಸ್ತಕವಿಮರ್ಶೆ :

# ಬೇಕಾಗಿದೆ ಕಾಯಕಲ್ಪ; ಪರಿಚಯ

೧. ಪ್ಯಾಂಥರ್ ಪದ್ಯಗಳು (ಕವನ ಸಂಕಲನ) : ಚೆನ್ನಣ್ಣ ವಾಲೀಕಾರ
ಸಂಕ್ರಮಣ ಪ್ರಕಾಶನ, ಧಾರವಾಡ
ಪುಟ ೬೮ ಬೆಲೆ : ೩ ರೂಪಾಯಿ

೨. ನೆಲ್ಸನ್ ಮಾಂಡೆಲಾ. ಸಂ : ಚಂದ್ರಶೇಖರ ಪಾಟೀಲ
ಸಂಕ್ರಮಣ ಪ್ರಕಾಶನ, ಧಾರವಾಡ
ಪುಟ ೫೪ ಬೆಲೆ : ೫ ರೂಪಾಯಿ

ಬಂಡಾಯ ಕಾವ್ಯ ತನ್ನ ಹಂಗಾಮದಲ್ಲೇ ಈ ರೀತಿ ಬರುತ್ತಿರುವುದು ವ್ಯಾಕುಲವುಂಟು ಮಾಡುತ್ತದೆ. ಸತ್ವಯುತ ಕೃತಿಗಳಿಂದ ಬಂಡಾಯ ಆಂದೋಲನ ಮೈದುಂಬಿಕೊಳ್ಳ ಬೇಕಾಗಿರುವ ಸಂದರ್ಭದಲ್ಲಿ ಬಂಡಾಯದ ಪ್ರಮುಖ ಕವಿಗಳೆಲ್ಲೊಬ್ಬರಾದ ಚೆನ್ನಣ್ಣ ವಾಲೀಕಾರರಿಂದ ಬಹಳಷ್ಟನ್ನು ನಿರೀಕ್ಷಿಸಿದವರಿಗೆ ಇಲ್ಲಿ ನಿರಾಸೆ ಕಾದಿದೆ. ಕವನ ಸಂಕಲನದ ಮುನ್ನುಡಿಯಲ್ಲಿ ಬರಗೂರರು, "ಏನೂ ಬರೆಯದೆ ಬಾಯಲ್ಲೇ ಬೀಗುವ 'ಬುದ್ಧಿವಂತ'ರಿಗಿಂತ ಬರೆಯುತ್ತ ಆ ಮೂಲಕ ಹದಗೊಳ್ಳಬಯಸುವ ಒಬ್ಬ ಸಾಮಾನ್ಯ ಲೇಖಕನೂ ನನಗೆ ಪ್ರೀತಿಪಾತ್ರನಾಗಿ ಮತ್ತು ಅರ್ಥಪೂರ್ಣವಾಗಿ ಕಾಣುತ್ತಾನೆ" ಎನ್ನುತ್ತಾರೆ. ಈ ಮಾತಿನ ಮೂಲಕ ಬಂಡಾಯ ಸಂಚಾಲಕರು ಎಷ್ಟು ಅತೃಪ್ತರಾಗಿದ್ದಾರೆ ಎನಿಸುತ್ತದೆ. ಜನಪರ ಆಶಯದ, ಜನರನ್ನು ತಲುಪುವ ಕವನಗಳನ್ನು ಹಾಡಲು ಬರುವಂತೆ ರಚಿಸುವ ಧಾವಂತದಲ್ಲಿ ಕಾವ್ಯ ಬರಡಾಗುತ್ತಿದುದನ್ನು ಚೆನ್ನಣ್ಣ ವಾಲೀಕಾರರು ಗಮನಿಸಿದಂತಿಲ್ಲ. ವಿಮರ್ಶಕನ ಕೆಲಸ ಹಗುರ ಮಾಡಿದಕ್ಕೆ ವಾಲೀಕಾರರಿಗೆ, ಬಂಡಾಯ ಕವಿಗಳಿಗೆ ಕೃತಜ್ಞರಾಗಿರಬೇಕೆ? ಅಥವಾ ಕನ್ನಡ ಸಾಹಿತ್ಯ ಸಂದರ್ಭದ ಬಗೆಗೆ ಕಳವಳ ಪಡಬೇಕೆ? ಅರ್ಥವಾಗುತ್ತಿಲ್ಲ. ಕವನ ಸಂಕಲನದ ಬಹುತೇಕ ಕವನಗಳಲ್ಲಿ ಹದಗೆಟ್ಟ ವ್ಯವಸ್ಥೆಯನ್ನು, ಶೋಷಣೆಗೆ ನೆರವಾಗುವ ಸಂಸ್ಥೆಗಳನ್ನು ಆಕ್ರೋಶ, ಅಸಹನೆಯಿಂದ ತರಾಟೆಗೆ ತೆಗೆದುಕೊಳ್ಳುವ ಕವಿ ದಲಿತರ ನಾಯಿ

ಪಾಡನ್ನು ಚಿತ್ರಿಸಲು ಪ್ರಯತ್ನಿಸಿದ್ದಾರೆ. ತಲೆತಲಾಂತರದಿಂದ ತುಳಿತಕ್ಕೊಳಗಾದ ಶೂದ್ರರ ಕುಂದಿ ಹೋದ ಅಸ್ತಿತ್ವವನ್ನು ಅರಳಿಸುವ ಆಸೆ, ಅವರಲ್ಲಿ ಹೋರಾಟದ ಮನೋಭಾವ ಬೆಳೆಸುವ ಕಾತರವಿದೆ. ಉದಾ : ಒಡ್ಡಯ್ಯನ ಹಾಡು, ದಿಕ್ಕಿಲ್ಲದವರ ಹಾಡು, ಬಡಮಕ್ಕಳ ಹಾಡು, ಮೀನುಗಾರರ ಹಾಡು ಇತ್ಯಾದಿ. ಸಿದ್ಧಲಿಂಗಯ್ಯನವರ "ಹೊಲೆ ಮಾದಿಗರ ಹಾಡಿ"ನ ಅನುಕರಣೆ ಮಾಡುವುದರಲ್ಲಿಯೇ ವಾಲೀಕಾರರಿಗೆ ತೃಪ್ತಿ ಇದ್ದಂತಿದೆ. ಆದರೆ ವಾಲೀಕಾರರ ಕವನಗಳಲ್ಲಿ ಬರಿ ಸಿಟ್ಟು ಒಡೆದು ಕಾಣುತ್ತದೆ. ರೈತ ಹೋರಾಟದ ಅನಿವಾರ್ಯತೆ ಹಾಗೂ ಅದರ ದುರಂತವನ್ನು ನಿರುದ್ವಿಗ್ನರಾಗಿ ಚಿತ್ರಿಸಿದ್ದರೆ "ನರಗುಂದ ರೈತ ಹೋರಾಟ"ದ ಹಾಡು ಪರಿಣಾಮಕಾರಿಯಾಗಬಹುದಿತ್ತು. ರಾಘವೇಂದ್ರಸ್ವಾಮಿಯ ಶೋಷಣಾ ಗೀತೆ, ಸಿಕ್ಕಿಂ ಸ್ವಾತಂತ್ರ್ಯ ಗೀತೆ ಕವನಗಳಲ್ಲಿ ವಿಡಂಬನೆ ಕೇವಲ ಗೇಲಿಯಾಗಿ ಬಿಡುವುದರಿಂದ ಅರ್ಥಪೂರ್ಣವೆನಿಸುವುದಿಲ್ಲ. "ಬಂಡಾಯದ ಕಿಡಿಗಳು" ಸಂಕಲನದ ಒಳ್ಳೆಯ ಕವನ. ಸೀಮಿತ ಆಶಯದ ಈ ಕವಿ ಬೆಳೆಯಬಲ್ಲನೆಂಬುದಕ್ಕೆ ಸಾಕ್ಷಿ. ಉತ್ತರ ಕರ್ನಾಟಕದ ಆಡು ಭಾಷೆಯ ಕಸುವು ಇವರ ಪ್ರತಿಭೆಗೆ ಕಾಯಕಲ್ಪವಾಗಬಲ್ಲದು. ಬಹಿರ್ಮುಖತೆ ಆವಶ್ಯಕತೆಗಿಂತ ಹೆಚ್ಚಿಗೆ ಪ್ರಾಧಾನ್ಯ ಪಡೆದರೆ ಸೃಜನಶೀಲತೆಗೆ ಪೆಟ್ಟು ಬೀಳುತ್ತದೆ ; ಬದುಕನ್ನು ಕುರಿತ ಗಾಢವಾದ ಚಿಂತನೆ ಹಾಗೂ ಪರಿಸರ ನೀಡಿದ್ದರ ಮಧ್ಯೆ ನಿಖರ ಸಂಘರ್ಷವಾದ ಮೇಲೆಹೊರಬರುವ ಕೃತಿ ಬಹುಕಾಲ ಉಳಿಯಬಲ್ಲದು.

ಪ್ರಪಂಚದಾದ್ಯಂತ ಸ್ವಾತಂತ್ರ್ಯಪ್ರೇಮಿಗಳ ಸಹಾನುಭೂತಿ ಗಳಿಸಿರುವ, ಇಂದಿಗೂ ಜೈಲಿನಲ್ಲಿಯೇ ಕೊಳೆಯುತ್ತಿರುವ ಕರಿಯ ಜನನಾಯಕನನ್ನು ಪರಿಚಯಿಸುವ ಈ ಪುಸ್ತಕವನ್ನು ಓದಿದ ಮೇಲೆ ಮಾಂಡೆಲಾ ಬಗ್ಗೆ ಗೌರವದ ಭಾವನೆ ಉಂಟಾಗುತ್ತದೆ. ಮೂರ್ಖ ಖೋಮೇನಿಗಳನ್ನು ಹಿಂಬಾಲಿಸುವ ಜನರಿರುವ ಈ ಜಗತ್ತಿನಲ್ಲಿ ದಿಕ್ಕೆಟ್ಟ ಜನಕ್ಕೆ ದಾರಿ ತೋರುವ ಅದಮ್ಯ ಚೇತನದ ಮಾಂಡೆಲಾ ಸಾಮ್ರಾಜ್ಯವಾದಿಗಳಿಗೆ ದುಃಸ್ವಪ್ನವಾಗಿದ್ದಾರೆ. ಈ ಪುಸ್ತಕದಲ್ಲಿ ಐದು ಕವನ, ಮತ್ತು ಐದು ಲೇಖನಗಳಿವೆ. ಮೊದಲ ಕವನ "ನಮಗಾಗಿ ಸತ್ತವರು" ಮಾಂಡೆಲಾ ಅವರ ಮಗಳು ಜಿಂಜಿ ಮಾಂಡೆಲಾ ಬರೆದದ್ದು. ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದವರ ಕೈಗೂಡದ ಆಸೆಯನ್ನು ಈ ಕವನ ಧ್ವನಿಸುತ್ತದೆ. ಪಾಟೀಲರೂ ಸಹ ತುರ್ತುಪರಿಸ್ಥಿತಿಯಲ್ಲಿ ತುಸು ದಿವಸ ಜೈಲಿನ ರುಚಿ ಕಂಡಿದ್ದರಿಂದ ಸ್ವಾತಂತ್ರ್ಯಕ್ಕಾಗಿ ತಹತಹಿಸುವ ಮಾಂಡೇಲಾರನ್ನು ಕುರಿತ ಅವರ ಕವನದಲ್ಲಿ ಸಹಜತೆ ಕಂಡು ಬರುತ್ತದೆ. ಘಾನದ ಕವಿ ಫಾಕ್ಸ್‌ನ ಕವನ "ಅಚ್ಚುಗಮ್ಮ ಆತ್ಮ"ದಲ್ಲಿ Black is beautiful ಎನ್ನುವ ಸೌಂದರ್ಯಶಾಸ್ತ್ರಕ್ಕೆ

ಹೊಸ ತಿರುವು ಕೊಟ್ಟ ತತ್ವದ ತಿರುಳಿದೆ. ಶೋಷಿತರು ಜ್ವಾಲಾಮುಖಿಯಾಗಿ ಸಿಡಿದೇಳುವ ಸೂಚನೆ ಕೇಶಿಕರ "ಲಾವಾ ಪ್ರವಾಹ" ಕವನದಲ್ಲಿದೆ. "ಮಹಾಲಂಗೊ" ಆಫ್ರಿಕಾದ ಹುತಾತ್ಮನನ್ನು ಸ್ಮರಿಸಿ ಕೆ.ಪಿ. ಸುರೇಶ ಬರೆದ ಕವನ. ಆಫ್ರಿಕದ ಅರ್ಥ ವ್ಯವಸ್ಥೆಯಲ್ಲಿ ಕರಿಯರು ಕೇವಲ ಜೀತದಾಳುಗಳು. ಕೈಗಾರಿಕೆಯ ಭಾರಿ ಲಾಭ ಅಲ್ಪ ಸಂಖ್ಯಾತ ಬಿಳಿಯರಿಗೆ ಹಾಗೂ ದೇಶದಲ್ಲಿ ಬಂಡವಾಳ ಹೂಡಿಕೆಗೆ ಉತ್ತೇಜನ ನೀಡಿ ಸಾಮ್ರಾಜ್ಯವಾದಿ ದೇಶಗಳ ಬೆಂಬಲ ಪಡೆಯುತ್ತಿರುವ ಬಿಳಿಯರು ಇಂದಿಗೂ ವರ್ಣ ದ್ವೇಷ ನೀತಿಯನ್ನು ಅನುಸರಿಸುತ್ತಲೇ ಇದ್ದಾರೆ. ರುದ್ರಪ್ಪ ಕಾಯಿಯವರು ತಮ್ಮ ಲೇಖನದಲ್ಲಿ ಹೇಯ ಕೃತ್ಯಗಳಿಗೆ ಹೆಸರಾಗಿರುವ ಬಿಳಿಯರ ಈ ದುರಾಡಳಿತ, ಸಾಮ್ರಾಜ ವಾದಿ ಶಕ್ತಿಗಳ ಕೈವಾಡದ ವಿಶ್ಲೇಷಣೆ ಮಾಡಿದ್ದಾರೆ. ತೇಜಸ್ವಿ ಕಟ್ಟಿಮನಿಯವರತ್ತ ಅಲ್ಪಸಂಖ್ಯಾತ ಬಿಳಿಯರಂತೆಯೇ ಕರಿಯರೂ ಸಹ ಕರಿಯರನ್ನು ಸುಲಿದ ದೃಷ್ಟಾಂತ ಗಳೊಂದಿಗೆ ಕರಿಯರ ನಿರಂತರ ಹೋರಾಟದ ಸ್ಥೂಲ ಇತಿಹಾಸವನ್ನು ಮುಂದಿಟ್ಟಿದ್ದಾರೆ. ಸನತ್‌ಕುಮಾರ ಬೆಳಗಲಿಯವರೂ ಸಹ ಆಫ್ರಿಕೆಯಲ್ಲಿನ ದಬ್ಬಾಳಿಕೆಯ ಕರಾಳ ರೂಪವನ್ನು ದಾಖಲಿಸುತ್ತಾರೆ. ಬಹುಸಂಖ್ಯಾತ ಕರಿಯರ ಶೋಷಣೆಗೆ ಹಾಗೂ ಅವರ ಹೋರಾಟವನ್ನು ಬರ್ಬರ ನೀತಿಯನ್ನನುಸರಿಸಿ ನಿಷ್ಕ್ರಿಯಗೊಳಿಸಿದ್ದಕ್ಕೆ ಹೆಚ್ಚು ಒತ್ತು ಬಿದ್ದಿದೆ. ಮಾಂಡೇಲಾರ ಹೋರಾಟದ ಬದುಕನ್ನು ಇನ್ನಷ್ಟು ವಿವರವಾಗಿ ಚಿತ್ರಿಸಿದ್ದರೆ ಅವರ ನಾಯಕತ್ವ ಢಾಳಾಗಿ ಮೂಡಿ ಬರುತ್ತಿತ್ತು ಹಾಗೂ ಪುಸ್ತಕದ ಮೌಲ್ಯ ಹೆಚ್ಚುತ್ತಿತ್ತು. ಸಂಕ್ರಮಣ/೧೦೫ರಲ್ಲಿ ಐದೂ ಲೇಖನಗಳು ಪ್ರಕಟವಾಗಿದ್ದವು. ಇವುಗಳಲ್ಲಿ ಕಾಯಿ, ಕಟ್ಟಿಮನಿ ಹಾಗೂ ಬೆಳಗಲಿಯವರ ಲೇಖನದ ವಿಷಯ ಒಂದೇ ಆಗಿದ್ದುದನ್ನು ಪುಸ್ತಕ ರೂಪದಲ್ಲಿ ಈ ಸಂಚಿಕೆಯನ್ನು ತರುವಾಗಲಾದರೂ ಗಮನಿಸ ಬೇಕಾಗಿತ್ತು.

—ಹಸನ್ ನಯೀಮ ಸುರಕೋಡ

"ನಾವು ಬೇರೆಯವರನ್ನು ಪ್ರೀತಿಸಬೇಕೆನ್ನುವುದು ನಮ್ಮ ದೋಷವನ್ನ ಮುಚ್ಚಿಟ್ಟು ಕೊಳ್ಳುವುದಕ್ಕಾಗಿ"

(ಹಳೆಯ ಗಾದೆಯ ಮಾತಿನಿಂದ)

# ರಂಗದ ಮೇಲೆ ಕುಣಿಯೋ ಜನ

## ದಂಗೆಯ ಮುಂಚಿನ ದಿನಗಳು . . .

ಗೆಳೆಯ ಪ್ರಸನ್ನರ "ಮಾರ್ಕ್ಸ್‌ವಾದೀ" ಪ್ರಯೋಗಗಳಲ್ಲಿ ಸಾಮಾನ್ಯವಾಗಿ ನಾಪತ್ತೆಯಾಗುವುದು ಮಾರ್ಕ್ಸ್‌ವಾದವೇ. ತಮಗೆ ರಾಜಕೀಯ ಬದ್ಧತೆಯಲ್ಲಿ ನಂಬಿಕೆ ಇದೆ ಎಂದು ಮತ್ತೆ ಮತ್ತೆ ಶ್ರೀಯುತರು ಹೇಳಿಕೊಂಡರೂ, ಮಾರ್ಕ್ಸ್‌ವಾದಿ ಜೀವನದರ್ಶನ ಏಕೋ ಪ್ರಸನ್ನರ ಕಲಾ ಸಂವೇದನೆಯಿಂದ ಹೊರಗೇ ಉಳಿದು ಬಿಡುತ್ತದೆ. ಈ ನನ್ನ ಅನುಮಾನಗಳನ್ನು ಪ್ರಸನ್ನರ ಇತ್ತೀಚಿನ ಪ್ರಯೋಗ "ದಂಗೆಯ ಮುಂಚಿನ ದಿನಗಳು" ದೃಢಪಡಿಸಿತು.

18ನೇ ಜೂನ್ 1855ರ ಡಾಲ್‌ಹೌಸಿಯ ಅಧಿಕೃತ ದಾಖಲೆಗಳಲ್ಲಿ ಔಧ್ ಸಂಸ್ಥಾನದ ಬಗ್ಗೆ ದೀರ್ಘ ಉಲ್ಲೇಖವಿದೆ. ಔಧ್ ಸಂಸ್ಥಾನದ ಬದುಕನ್ನು ಕತ್ತರಿಸಿ ಹಾಕಲು ಬ್ರಿಟಿಷ್ ಸಾಮ್ರಾಜ್ಯಶಾಹೀ ತೆಗೆದುಕೊಂಡ ತೀರ್ಮಾನದಲ್ಲಿ ತುಂಬ ಪ್ರಮುಖವಾದ ದಾಖಲು ಅದು. ಅಲ್ಲಿ ಡಾಲ್‌ಹೌಸಿ ಔಧ್‌ನ ಸಂಸ್ಥಾನಿಕರ ಬಗ್ಗೆ ಮೇಲು ನೋಟಕ್ಕೆ ತುಂಬ ಭಾವುಕವೆನ್ನಿಸುವ ರೀತಿಯಲ್ಲಿ ಬರೆಯುತ್ತಾನೆ. ಜನಸಾಮಾನ್ಯರ ಗೋಳನ್ನು ಕೇಳಿರದಿದ್ದ ವರ್ಗ ಅದು ಎಂದು ಅವನ ದೂರು. ವಿಲಾಸಗಳಲ್ಲಿ ಈ ಜನ ಮುಳುಗಿ ಹೋಗಿದ್ದಾರೆ ಎಂಬುದು ಇವನವಾದ. [ಪ್ರಸನ್ನ ಇದನ್ನು ತಮ್ಮ ಬ್ರೋಷರ್‌ನಲ್ಲಿ ಬಳಸಿಕೊಳ್ಳಬಹುದಾಗಿತ್ತು]

25ನೇ ಜೂನ್ 1981ರ ಸಂಜೆ ರವೀಂದ್ರ ಕಲಾಕ್ಷೇತ್ರದಲ್ಲಿ ಡಾಲ್‌ಹೌಸಿಯ ಜೀವನದರ್ಶನದ ಪ್ರಾಮಾಣಿಕ ಪುನರಾವರ್ತನೆಯನ್ನು ನಾನು ನೋಡಿದೆ. ವಿಲಾಸದಲ್ಲಿ, ಭೋಗದಲ್ಲಿ [ಪ್ರಸನ್ನರ ಮಾತಿನಲ್ಲಿ ಹೇಳಬೇಕೆಂದರೆ Decadent] ಮುಳುಗಿ ಹೋಗಿದ್ದರಿಂದ ಅವರು ರಾಜ್ಯವನ್ನು ಕಳೆದುಕೊಂಡರು ಎಂಬ ತಾತ್ವಿಕ ನಿಲುವು ನಾಟಕದ್ದು. ಬ್ರಿಟಿಷರು ರಾಜ್ಯವನ್ನು ಕಸಿದುಕೊಳ್ಳಲು ಮಾಡಿದ್ದ ಅನೇಕ ಸಂಚುಗಳಲ್ಲಿ ಈ ಚಿತ್ರಣ ಕೂಡ ಒಂದು ಎಂದು ಪ್ರಸನ್ನರ "ರಾಜಕೀಯ" ಪ್ರಜ್ಞೆಗೆ ಹೊಳೆಯದೇ ಇರುವುದು ಅಂಥ ದೊಡ್ಡ ಆಶ್ಚರ್ಯದ ಸಂಗತಿಯೇನಲ್ಲ. ಕೆಲವು ವರ್ಷಗಳ ಹಿಂದೆ ಪ್ರಕಟವಾದ ಸೋವಿಯತ್ ಪ್ರಕಟಣೆ "History of India" ಓ ಕೆ. ಅನತೋವಾ ಮತ್ತು ಇತರರು] ದಲ್ಲಿ ಸ್ಪಷ್ಟವಾಗಿಯೇ ಈ ಮಾತನ್ನು ಹೇಳಲಾಗಿದೆ: ಔಧ್

ಸಂಸ್ಥಾನವನ್ನು ಬ್ರಿಟಿಷರು ಕಸಿದುಕೊಂಡಿದ್ದು ಅದನ್ನು ಕೆಟ್ಟದಾಗಿ ಆಳಲಾಗುತ್ತಿದೆ ಎಂಬ ನೆಪದ ಮೇಲೆ. ಆದರೆ, ಬ್ರಿಟಿಷರು ಎಸೆದ ಮಂಕುಬೂದಿಯು ಮಂಪರು ಪ್ರಸನ್ನರಿಗೆ ಹೋಗಿಲ್ಲ.

ಈ ಕಾಲ ಘಟ್ಟದ ಪ್ರಮುಖ ರಾಜಕೀಯಾಂಶಗಳಲ್ಲೊಂದಾದ ಈ ಸಾಮ್ರಾಜ್ಯ ಶಾಹೀ ಸಂಚುಗಾರಿಕೆಯ ಮೇಲೆ ರಾಜಕೀಯ ಒತ್ತು ಬೀಳಬೇಕೆಂದು ನನ್ನಂಥವರು ನಿರೀಕ್ಷಿಸುವುದು ಸಹಜ. ಆದರೆ ಈ ಅಂಶವೇ ನಾಟಕದಿಂದ ಕಾಣೆಯಾಗಿವೆ. ಬ್ರಿಟಿಷರ ಬಗ್ಗೆ ಯಾವುದೇ ರೀತಿಯ ಅಸಹನೆ ರಂಗ ಪ್ರಯೋಗದಲ್ಲಿ ವ್ಯಕ್ತವಾಗುವುದಿಲ್ಲ. ಇಲ್ಲಿ ಬರುವ ರೆಸಿಡೆಂಟ್‌ನ ನಡುವಳಿಕೆ, ಕ್ರಿಯೆ, ಮಾತು ಇವೆಲ್ಲವೂ ಈ ರೀತಿಯ ರಾಜಕೀಯ ಟೀಕೆಗೆ ಒಳಗಾಗುವುದೇ ಇಲ್ಲ. "ಬೇರೆಯವರನ್ನು ಬೈದು ಏನು ಪ್ರಯೋಜನ ಸ್ವಾಮಿ, ನಮ್ಮನ್ನು ನಾವು ನೋಡಿ ಮಾಡಿಕೊಳ್ಳೋಣ" ಎಂಬ ಧೋರಣೆ ನಾಟಕದ್ದು. ಇದಿಷ್ಟು ನಾಟಕದ ಅತಿ ಮುಖ್ಯ ರಾಜಕೀಯಾಂಶವನ್ನು ಕುರಿತದ್ದು, ಈ ಮುಖ್ಯ ಸತ್ಯದ ಕಡೆಗೆ ಒತ್ತು ಕೊಡದ ಗೆಳೆಯ ಪ್ರಸನ್ನ ತಮ್ಮದೇ ಆದ ಕೆಲವು ತಾತ್ವಿಕ ಭ್ರಮೆ ಗಳೊಂದಿಗೆ ಚದುರಂಗವಾಡಿಕೊಂಡಿದ್ದು "ಒಣಮರ ಚಿಗುರಿ" ಎಂಬ ಆಶಯದ ಹಾಡೊಂದನ್ನು ಶ್ರೀ ಕೆ.ವಿ. ಸುಬ್ಬಣ್ಣನವರು ಈ ನಾಟಕಕ್ಕೆ ಬರೆದಿದ್ದಾರೆ. 'ಆ ಕಾಲ ಮಾನದ ಔಧ್ ನಾಗರಿಕತೆಯನ್ನು ಕುರಿತ ರೂಪಕ ಇದು. ಆದರೆ, ಇಲ್ಲಿ ನನ್ನದೊಂದು ಸಣ್ಣ ಅನುಮಾನವಿದೆ. ಹತ್ತೊಂಬತ್ತನೆಯ ಶತಮಾನದ ಔಧ್ ನಾಗರಿಕತೆ ಒಣ ಮರವೇ ಎಂಬ ಈ ಪ್ರಶ್ನೆಗೆ ನಿರ್ದೇಶಕ ಹಾಗೂ ಹಾಡುಗಾರ ಇಬ್ಬರೂ ಒಕ್ಕೊರಲಿ ನಿಂದ ಹೌದು ಎಂಬ ಉತ್ತರ ಕೊಟ್ಟಾರು ! ಆದರೆ ಒಂದಷ್ಟು ಸತ್ಯಗಳು ಬೇರೆಯೇ ಆದ ಕಥೆಯನ್ನೂ ಹೇಳುತ್ತವೆ.

ಆ ನಾಗರಿಕತೆ ತನ್ನ ಕೇಂದ್ರಿತ ಸಮೃದ್ಧತೆಯ ಶೃಂಗದಲ್ಲಿದ್ದ ಸ್ಥಿತಿ ಅದು ; ದೈಹಿಕ ಸುಖಗಳ, ಉಲ್ಲಾಸಗಳ ಎತ್ತರಗಳನ್ನು ಹಿಡಿಯ ಬಯಸುತ್ತಿದ್ದ ಘಟ್ಟ ಅದು. ಶರಾರ್‌ನ ಪುಸ್ತಕದ ಸುಮಾರಾದ ಓದು ಕೂಡಾ ಆ ಸಂಸ್ಕೃತಿಯ ಸಮೃದ್ಧತೆಯನ್ನು ಪರಿ ಚಯಿಸುತ್ತದೆ. ಬಡತನದಲ್ಲಿ ಬಳಲುತ್ತಿದ್ದ ಜನತೆ ಕೂಡಾ ತನ್ನದೇ ಆದ style ಅನ್ನ ನಿರ್ಮಿಸಿಕೊಂಡಿದ್ದ ಸ್ಥಿತಿ ಅದು. ಊಟ, ತಿಂಡಿ, ವೇಷ, ಭೂಷಣ, ಅಲಂಕಾರ, ಕಾವ್ಯ, ಭಾಷೆ ಹೀಗೆ ಎಲ್ಲದರಲ್ಲಿಯೂ ಒಂದು ಬಗೆಯ ಸೂಕ್ಷ್ಮತೆಯನ್ನು ಬೆಳೆಸಿ ಕೊಂಡಿದ್ದ ಜನಾಂಗ ಅದು ; ಆದ್ದರಿಂದಲೇ, ಆ ನಾಗರಿಕತೆಯ ಬಾಹ್ಯವಿವರಗಳ, ನಾಡಿಮಿಡಿಸದ ಪ್ರಾಥಮಿಕ ಪರಿಚಯವಿದ್ದರೂ ಕೂಡ ಆ ನಾಗರಿಕತೆಯನ್ನು "ಒಣ ಮರ" ಎನ್ನಲು ಧೈರ್ಯ ಬರುವುದಿಲ್ಲ. ಆದರೆ ಸುಬ್ಬಣ್ಣನವರು ತಮ್ಮ ಧೈರ್ಯವನ್ನು ಧಾರಾಳವಾಗಿಯೇ ಪ್ರದರ್ಶಿಸಿದ್ದಾರೆ.

ಆಗಿನ ಚಾರಿತ್ರಿಕ ಸ್ಥಿತಿಯನ್ನು Decadent ಎಂದು ಅರ್ಥೈಸಿಕೊಂಡಿರುವ ನಿರ್ದೇಶಕರ ಕಲ್ಪನೆಗೆ ಸರಿಯಾಗಿಯೆ ಈ ಹಾಡು ಹೊಂದಿಕೊಳ್ಳುತ್ತದೆ. ಆದರೆ ಇಲ್ಲಿ ನಿಜವಾದ ಪ್ರಶ್ನೆ ಎಂದರೆ, ಒಂದು ನಾಗರಿಕತೆಯನ್ನು Decadent ಎಂದು ನಿಯೋಜಿಸುವುದು ಯಾವಾಗ? ಎಂಬುದು. ಖ್ಯಾತ ವಾಮಪಂಥೀಯ ಚಿಂತಕ ಸಾರ್ತ್ರ ಈ ಪ್ರಶ್ನೆಗೆ ಒಂದು ರೀತಿಯ ಉತ್ತರ ನೀಡುತ್ತಾನೆ. ಆತನ ಪ್ರಕಾರ, ಒಂದು ಸಂಸ್ಕೃತಿಯ Decadent ಅನ್ನೂ ಅದರ ಮೌಲ್ಯಗಳಿಂದಲೇ ನಿರ್ಧರಿಸಬೇಕು. ಅಂದರೆ ಆ ಸಂಸ್ಕೃತಿ ಒಮ್ಮೆ ಸಾಧಿಸಿದ್ದ ಬದುಕಿನ ಶ್ರೇಷ್ಟತೆ ಹಾಗೂ ಅಧಃಪತನ ಗೊಂಡರೆ ಅದು ಡಿಕಡೆನ್ಸ್ ಎಂದು ಆತ ವಿಶ್ಲೇಷಿಸಿದ. ಆದರೆ, ಮೊಘಲ್ ನಾಗರಿಕತೆಯ ಸಮೃದ್ಧಿಯ ಹಂತ ಇನ್ನೂ ಹತ್ತೊಂಬತ್ತನೆಯ ಶತಮಾನದಲ್ಲಿ ಪೂರ್ಣವಾಗಿ ಮಾಯ ವಾಗಿರಲಿಲ್ಲ. ಹೀಗಾಗಿ, ಅದನ್ನು Decadent ಎನ್ನಲು ಸಾಧ್ಯವಿಲ್ಲ ಎಂಬುದು ಈ ಲೇಖಕನ ಅನಿಸಿಕೆ.

ಜೊತೆಗೆ, ಆ ಜೀವನ ಕ್ರಮ ಎರಡು ರೀತಿಯವರಿಗೆ ಅಸಹ್ಯವಾಗಿ ಕಾಣಲು ಸಾಧ್ಯ. ಒಂದು, ವಿಕ್ಟೋರಿಯನ್ ಮಡಿವಂತಿಕೆಯ ಮೌಲ್ಯಗಳನ್ನು ರಕ್ತಗತವಾಗಿರಿಸಿ ಕೊಂಡಿರುವವರಿಗೆ ಇನ್ನೊಂದು, ಭಾರತೀಯ ವಾತಾವರಣದಲ್ಲಿ ರಾಷ್ಟ್ರೀಯ ಸ್ವಯಂ ಸೇವಕ ಸಂಘದವರಿಗೆ ಹತ್ತೊಂಬತ್ತನೆ ಶತಮಾನದ ಬ್ರಿಟಿಷ್ ಅಧಿಕಾರಿಗಳಿಗೆ ಭಾರತೀಯ ಬದುಕು, ಅದರಲ್ಲಿಯೂ ಲಖನೌ ಬದುಕು ಅಸಹ್ಯವಾಗಿ ಕಂಡದ್ದು ಮೊದಲನೆಯ ಕಾರಣಕ್ಕೆ. ಇನ್ನು ಎರಡನೆಯದರ ಬಗ್ಗೆ ಹೆಚ್ಚು ವಿವರಣೆ ಅನಗತ್ಯ.

ಹೀಗೆ, ಇಡೀ ನಾಟಕದಲ್ಲಿ ಚರಿತ್ರೆಯನ್ನ "ಸಾಂಪ್ರದಾಯಿಕ ಮೌಲ್ಯಗಳ ಮೂಲಕ ವಿಶ್ಲೇಷಿಸಿದಾಗ ಬರುವ ವಿಚಿತ್ರ ಬಗೆಯ ಮಡಿವಂತಿಕೆ ಮತ್ತು ಅದರ ಜೊತೆಗೆ ಸಹಜವಾಗಿ ಹುಟ್ಟುವ ಲೈಂಗಿಕ ಗೋಸುಂಬೆತನ ಉದ್ದಕ್ಕೂ ಮೂಡಿ ಬಂದಿದೆ. ಒಟ್ಟಾರೆಯಾಗಿ, ಆ ಬದುಕಿನ ರೀತಿಯ ಬಗ್ಗೆ ತಿರಸ್ಕಾರ. ಆದರೆ, ನಾಟಕದ ಉದ್ದಕ್ಕೂ ಮಧ್ಯಮವರ್ಗದ ಪ್ರೇಕ್ಷಕರಿಗೆ ಕಚಗುಳಿ ಇಡುವ ಪೋಲಿ ಮಾತುಗಳು. ಅದೇ ಹಳೆಯ ಹೊಂದಾಣಿಕೆ : ಮಡಿವಂತಿಕೆ ಮತ್ತು ಈ ಪಾತ್ರವೆ.

ಇನ್ನು ನಾಟಕದಲ್ಲಿ ಚರಿತ್ರೆಯ ವಾಸ್ತವಿಕ ಅಂಶಗಳ ಬಗ್ಗೆ ಒಂದೆರಡು ಮಾತು. ಈ ನಾಟಕದ ಬಗ್ಗೆ ಬಂದಿರುವ ಬ್ರೋಶರ್‌ನಲ್ಲಿ ಪ್ರಸನ್ನ ಒಂದು ವಿಚಿತ್ರವಾದ ಮಾತನ್ನು ಹೇಳುತ್ತಾರೆ. ಒಂದೇ ವರ್ಷದ ಅವಧಿಯಲ್ಲಿ ವಿಲಾಸಗಳಲ್ಲಿ ಮುಳುಗಿದ್ದ ಜನ ಕ್ರಾಂತಿ ಕಾರಿಯಾಗಿ ಪರಿವರ್ತಿತವಾದರು ಎಂಬರ್ಥದ ಮಾತದು. ಔಧ್‌ನ ಚರಿತ್ರೆಯೆ ಗೊತ್ತಿಲ್ಲದಿರುವ ಹೇಳಿಕೆ ಇದು. ಏಕೆಂದರೆ, ಹತ್ತೊಂಬತ್ತನೆ ಶತಮಾನದ ಔಧ್‌ನ

ಚರಿತ್ರೆ ಪೂರಾ ದಂಗೆಗಳಿಂದ, ಆಸ್ಫೋಟಗಳಿಂದ ತುಂಬಿರುವಂಥದು. ಹತ್ತಕ್ಕೆ ಕಡಿಮೆ ಯಿಲ್ಲದಷ್ಟು ದಂಗೆಗಳು–ಅಲ್ಲಿ ನಡೆದಿದ್ದವು. ಆದ್ದರಿಂದ, ಅದು ಉಕ್ಕುತ್ತಲೇ ಇದ್ದ ಜ್ವಾಲಾಮುಖಿ. ಒಂದು ವರ್ಷದ ಅವಧಿಯಲ್ಲಿ ಅವರು ಕ್ರಾಂತಿಕಾರಿಗಳಾಗಿ ಪರಿವರ್ತಿತ ವಾಗಲಿಲ್ಲ. ಅನೇಕ ದಶಕಗಳಿಂದ ಆ ಜನ ಮತ್ತೆ ಮತ್ತೆ ಉರಿದು ಬೀಳುತ್ತಿದ್ದರು. ಹೀಗಾಗಿ, ಪ್ರಸನ್ನರ ನಿಲುವುಗಳು ತಮಾಷೆ ಹೇಳಿಕೆಗಳಾಗಿ ಕಾಣುತ್ತವೆ.

ಇಡೀ ನಾಟಕದಲ್ಲಿ ರಾಜಕೀಯ ತಿಳಿವಳಿಕೆಗಳ, ಸೂಕ್ಷ್ಮ ವಿವರಗಳ ಕೊರತೆ ಎದ್ದು ಕಾಣುತ್ತಿತ್ತು. ನಾಟಕದಲ್ಲಿ ಬ್ರಿಟಿಷರು ಆ ರಾಜ್ಯವನ್ನು ಆಕ್ರಮಿಸಿದ ರೀತಿಯ ಬಗ್ಗೆ ಸ್ಪಷ್ಟ ಗ್ರಹಿಕೆ ವ್ಯಕ್ತವಾಗುವುದಿಲ್ಲ. ಏಕೆಂದರೆ, ಹಿಂದೆ ಆದ ಒಪ್ಪಂದದ ಪ್ರಕಾರ ಬ್ರಿಟಿಷರೇ ಆ ರಾಜ್ಯದ ಸಂರಕ್ಷಣೆಗೆ ನೈತಿಕವಾಗಿ ಹೊಣೆಗಾರರಾಗಿದ್ದರು. ಈ ಕಾರಣ ಕ್ಕಾಗಿಯೇ, ಹತ್ತು ಸಾವಿರ ಜನ 'ಕುಂಪಿಣಿ' ಯೋಧರು ಆ ರಾಜ್ಯದಲ್ಲಿದ್ದರು. [ಅವರನ್ನು ಸಾಕಲು ಹೆಚ್ಚಿಸಿದ ತೆರಿಗೆಗಳ ಭಾರ ಇನ್ನೊಂದು ಆಸ್ಫೋಟಕ್ಕೆ ಕಾರಣ ವಾಯಿತು] ಅದನ್ನು ಹತ್ತಿಕ್ಕಲು ಬ್ರಿಟಿಷ್ ಸೇವೆಗಳನ್ನೆ ಅಲ್ಲಿಯ ನವಾಬರು ಬಳಸಿ ಕೊಂಡರು. ಹೀಗೆ ಅನೇಕ ಒಳ ಚಿತ್ರಗಳು ಈ ಸಂಸ್ಥಾನದ ಚರಿತ್ರೆಗೆ ಇದೆ. ಅಂಥ ಸಂಕೀರ್ಣ ಪರಿಸ್ಥಿತಿಯನ್ನು ಅರ್ಥೈಸಿಕೊಳ್ಳುವ ಪ್ರಯತ್ನವೇ ಇಲ್ಲಿ ಕಾಣುವುದಿಲ್ಲ. ಇಲ್ಲಿ ಎಲ್ಲವೂ ಸ್ಪಷ್ಟ ; ಸರಳ ಆದ್ದರಿಂದ, ಪ್ರಸನ್ನರಿಗೆ ಯಾವ ಸಂಕೀರ್ಣ ಸಮಸ್ಯೆಯೂ ಭಾದಿಸಿಲ್ಲ, ಲೀಲಾಜಾಲವಾಗಿ ಅವರು ತಮ್ಮ ಕಲ್ಪನೆಯ ಒಂದೆರಡು "ಕ್ರಾಂತಿಯ" ಪಾಠಗಳನ್ನು ಬಾರಿಸಿ ಬಿಟ್ಟಿದ್ದಾರೆ. ತಮ್ಮ ಮಧ್ಯಮವರ್ಗದ ನೈತಿಕ ಮೌಲ್ಯಗಳ ಮೂಲಕ ಚರಿತ್ರೆಯನ್ನು ನೋಡಲು ಪ್ರಯತ್ನಿಸಿದ್ದಾರೆ. ಹೀಗಾಗಿ, ಬಡತನ ಮತ್ತು ಕ್ಷಾಮದ ನಡುವಿನ ವ್ಯತ್ಯಾಸ, ಅವನತಿಯ ಅಂಚಿನಲ್ಲಿರುವ ನಾಗರಿಕತೆಯ ಸೂಕ್ಷ್ಮತೆ ಮತ್ತು ಹೊಸ ಉತ್ಪಾದನಾ ಸಾಧನಗಳನ್ನು ಆಧರಿಸಿರುವ ಸಮಾಜದ ದೈತ್ಯಶಕ್ತಿಗಳ ನಡುವಣ ವ್ಯತ್ಯಾಸ-ಮುಂತಾದ ಮುಖ್ಯ ಅಂಶಗಳ ತಾತ್ವಿಕ ಗ್ರಹಿಕೆಯೇ ನಾಟಕದಲ್ಲಿ ಇಲ್ಲವಾಗಿದೆ. ಆದರೆ ಭಾರತವನ್ನು ಜಯಿಸಿದ ಬ್ರಿಟಿಷರ ಸಾಮರ್ಥ್ಯದ ಗುಟ್ಟು ಮಾರ್ಕ್ಸ್‌ನಿಗೆ ಗೊತ್ತಿತ್ತು : ಅದು ಯಂತ್ರ ನಾಗರಿಕತೆಯ ದೈತ್ಯಜಯ ಎಂದು.

ಹತ್ತೊಂಬತ್ತನೆಯ ಶತಮಾನದ ಔಧ್ ಅನ್ನು ಕುರಿತ ನಾಟಕ, ಮಾರ್ಕ್ಸ್‌ ವಾದೀ ದೃಷ್ಟಿಕೋನದಿಂದ ಹೊರಟಿದ್ದಾದರೆ, ಈ ಎಲ್ಲ ಅಂಶಗಳನ್ನು ಒಳಗೊಂಡೇ ಸಾಗಬೇಕು. ಆದರೆ ಇಂಥ ಗತಿತಾರ್ಕಿಕ ವಿಶ್ಲೇಷಣೆಗೆ ಪ್ರಸನ್ನ ಎಳ್ಳು ನೀರು ಬಿಟ್ಟು ಮುಂದೆ ಸಾಗಿದ್ದಾರೆ.

ನಾಟಕದ ರಂಗಾನುಭವ ತನ್ನ ಒಡಲೊಳಗಿನ ಈ ಪೊಳ್ಳುತನ, ಅಸಂಗತತೆಗಳಿಗೆ ಅನುಗುಣವಾಗಿಯೇ ಸಾಗಿತು. ನನಗೆ ಬೆರಗಿನ ಸಂಗತಿ ಎಂದರೆ, ಪ್ರಸನ್ನ ಕಳೆದ

ಐದು ವರ್ಷಗಳಲ್ಲಿ ಬೆಳೆದೇ ಇಲ್ಲ ಎನ್ನುವುದು. ಈ ನಾಟಕ ತನ್ನ ರಂಗಾನುಭವದ ವಟ್ಟಿಗೆ "ಹುತ್ತವ ಬಡಿದರೆ" ನಾಟಕದ ಪುನರಾವರ್ತನೆ. ಅದೇ ಬಗೆಯ ರಂಗ ತಂತ್ರ, ದೃಶ್ಯಾವಳಿ, ಭಾವ ನಿರ್ಮಾಣ ಕೌಶಲ. ಅದೇ ಬಗೆಯ ಸ್ಥಾವರ ಜನತೆ (ಅಂದರೆ ಅವರೊಂದು ತಾತ್ವಿಕ ವಾಸ್ತವ ಮಾತ್ರ) ಹೀಗಾಗಿ, ಪ್ರಸನ್ನರ ರಂಗಚರಿತ್ರೆಯಲ್ಲಿ ಸವೆದು ಹೋಗಿರುವ ಅನೇಕ ತಂತ್ರಗಳು, ಸಿದ್ಧ ಫಾರ್ಮುಲಾಗಳು ಈ ನಾಟಕದಲ್ಲಿ ಮತ್ತೆ ಮತ್ತೆ ಮಗಚು ಹೊಡೆಯುವಷ್ಟು ಕಾಣಿಸಿಕೊಳ್ಳುತ್ತವೆ.

ನಾಟಕದ ಮೊದಲ ದೃಶ್ಯವೇ ಪ್ರಸನ್ನರಿಗೆ ಕೈಕೊಟ್ಟಿದೆ. ಅಲ್ಲಿ ಬರುವ ರಾಜಕೀಯ ಕಾರ್ಯಕರ್ತರಿಗೂ, ನಾಟಕದ ಮುಖ್ಯ ಅನುಭವಕ್ಕೂ ಏನು ಸಂಬಂಧ ಎಂಬುದನ್ನು ಪ್ರಸನ್ನರೇ ಪುಸ್ತಕ ಬರೆದು ವಿವರಿಸಬೇಕು. ಕುಡಿತ, ಜೂಜುಗಳಲ್ಲಿ ಮುಳುಗಿರುವ "ಜನರೇ" ಮುಂದೆ ಕ್ರಾಂತಿಕಾರಿಗಳಾಗುತ್ತಾರೆ ಎಂಬ ನಂಬಿಕೆ ಪ್ರಸನ್ನರದ್ದಾಗಿದ್ದರೆ, ದಯವಿಟ್ಟು ಶ್ರೀಯುತರು Lumpen ಗುಂಪುಗಳ ಬಗ್ಗೆ ಮಾರ್ಕ್ಸ್‌ವಾದಿಗಳ ಚಿಂತನೆಯನ್ನು ಮತ್ತೊಮ್ಮೆ ಗಮನಿಸಬೇಕು. ಇನ್ನು ನಂತರ ಬರುವ ಸೂತ್ರಧಾರನ ದೃಶ್ಯವೂ ಅಷ್ಟೇ ಅಸಂಗತ. ಯಾರನ್ನೊ 'ಗೇಲಿಮಾಡಲು ತಂದಿರುವ ಸತ್ವಹೀನ ಪಾತ್ರ ಅದು.

ಮುಖ್ಯ ಕ್ರಿಯೆಯ ಉಪಭಾಗದ ಆ "ಕ್ರಾಂತಿಕಾರಿಯ" ಪಾತ್ರ ಚಿತ್ರಣದ ತಾತ್ವಿಕ ಸತ್ಯವನ್ನು ವಿಶ್ಲೇಷಿಸದೇ ಇರುವುದು ಮೇಲು. ಏಕೆಂದರೆ, ನಾಟಕದ ವಾಚ್ಯಾರ್ಥದ ಪ್ರಕಾರ ಹೆದರಿ ಮತ್ತು ಕ್ರಾಂತಿಯ ನಡುವೆ ಸಂಬಂಧವಿದೆ ಅಂಥ ಇತ್ಯಾತ್ಮಕ "ಕ್ರಾಂತಿಕಾರೀ" ಪಾತ್ರವನ್ನು ತರುವ ಹಠವಾದರೂ ಏಕೆ? ನಾನು ನೋಡಿದ ಎರಡನೆಯ ಪ್ರಯೋಗದಲ್ಲಂತೂ ನಾಟಕವನ್ನು ರಕ್ಷಿಸುವ ಅಂಗಗಳೇ ಇರಲಿಲ್ಲ. ಆನಂದ್, ಮಾಲತಿ, ಸತ್ಯಸಂದ, ಮಾನು ಪಾತ್ರಗಳಿಗೆ ಖಂಡಿತವಾಗಿ ತಪ್ಪು ಆಯ್ಕೆ.

ಇನ್ನು ರಾಜೀವ್ ತಾರಾನಾಥರ ಸಂಗೀತ ನಾಟಕದಲ್ಲಿ ಎಲ್ಲಿದೆ? ಆ ಚಾರಿತ್ರಿಕ ಯುಗದ ಭಾವುಕ ವಾಸ್ತವಗಳಿಗೆ ಅನುಗುಣವಾದ ರಾಗ ಸಂಯೋಜನೆಯನ್ನು ನಾನು ನಿರೀಕ್ಷಿಸಿದ್ದೆ. ಆದರೆ, ಅಂಥ ಪ್ರಯತ್ನದ ಸುಳಿವೇ ಅಲ್ಲಿ ಇರಲಿಲ್ಲ. ರಾಜೀವ್ ತಾರಾನಾಥರಂಥ ಮಹತ್ವದ ಸಂಗೀತಗಾರರು ತಮ್ಮ ಹೆಸರುಗಳ ಬಗ್ಗೆ ಇಷ್ಟೊಂದು ಸಡಿಲವಾಗಿ ಬಿಟ್ಟರೆ ಗತಿ ಏನು ?

ವಾಸ್ತವಿಕ ವಿವರಗಳಿಗೆ ಗಮನವೇ ಇಲ್ಲದೆ, ಆದರೂ ಮೂಲತಃ ತೆಳು ವಾಸ್ತವಿಕ ಶೈಲಿಯಲ್ಲಿ ಹರಿದ ಈ ನಾಟಕದ ವೈಫಲ್ಯ ಪೂರ್ಣವಾಗಿ ಪ್ರಸನ್ನರಿಗೇ ಸೇರತಕ್ಕದು. ಮೂಲ ಶೈಲಿಗೆ ಇನ್ನಷ್ಟು ಸಂಕೇತಿಕ ಶೈಲಿಗಳನ್ನು ಬೆರೆಸಿ ರೂಢಿಸಿಬಿಟ್ಟಿದ್ದಾರೆ. ಹೀಗಾಗಿ, ಈ ಬೆರಕೆ ಪಡಕೊಳ್ಳುವ ಹೊತ್ತಿಗೆ ಪ್ರೇಕ್ಷಕ ಸುಸ್ತಾಗಿ ಹೋಗಿರುತ್ತಾನೆ.

—ಡಿ.ಆರ್. ನಾಗರಾಜ್



# ಬೆಳಕಿನ ರಾಮಮೂರ್ತಿ

ನಮ್ಮ ಸುತ್ತಲಿನ ಪರಿಸರವು ಮಲಿಗೊಂಡಂತೆ-ಜನರೂ ಮಲಿನಗೊಂಡಿದ್ದಾರೆ ಎಂದು ಹೇಳಬೇಕೋ ಬಿಡಬೇಕೋ ಗೊತ್ತಿಲ್ಲ. ಆದರೆ ದಿನನಿತ್ಯ ಬೆಂಗಳೂರಿನಂಥ ಕೈಗಾರಿಕಾ ನಗರಗಳಲ್ಲಿ ಶಬ್ದ ನಮ್ಮನ್ನು ದುರ್ಬಲಗೊಳಿಸುತ್ತಿರುವುದಂತೂ ನಿಜ. ಆಗ ಮೋಡಗಳಂತೆ ಎದ್ದೇಳುವ ಹೊಗೆ ಕವಿಯು ಹೃದಯವನ್ನಂತೂ ಅರಳಿಸಲಾರದು. ಇದೇ ರೀತಿಯಲ್ಲಿ ನಮ್ಮನ್ನು ಯಾವಾಗಲೂ ಬೋರ್ ಮಾಡುವ ಜನ ನಮ್ಮ ಸುತ್ತ ತುಂಬಿಕೊಂಡಿದ್ದಾರೆ. ವಿಷಯವಿಲ್ಲದೆ ಕೊರೆಸಿಕೊಳ್ಳುವುದೆಂದರೆ ತುಂಬ ಕಷ್ಟಕರ ಕೆಲಸ. ಇದಕ್ಕೆ ಅಪವಾದವಾಗಿ ಬೆಳಕಿನ ರಾಮಮೂರ್ತಿ ನಮ್ಮನ್ನು ಮಾತಿನ ಗುಂಗಿನಲ್ಲಿ ತೇಲಿಸುವ ಮತ್ತೆ ಮತ್ತೆ ನಗಿಸುವ ಈ ವ್ಯಕ್ತಿ ಕನ್ನಡ ರಂಗಭೂಮಿಗೆ ಚಿರಪರಿಚಿತ ಎಂದು ನಾನು ಪ್ರಮಾಣಪತ್ರ ಕೊಡುವುದು ಅನಗತ್ಯವಾದರೂ ನಾಲ್ಕು ಮಾತು ಬರೆಯಬೇಕೆನ್ನಿಸುತ್ತದೆ.

ಯಾವಾಗಲೂ ನಾಟಕದ ಬಗ್ಗೆ—ಅದರ ಬೆಳಕಿನ ಬಗ್ಗೆ ಚಿಂತಿಸುವ ರಾಮಮೂರ್ತಿ ಇಂದು ಭಾರತದಲ್ಲಿ ರಂಗಭೂಮಿಗೆ ಸಂಬಂಧಿಸಿದ ತಂತ್ರಜ್ಞರಲ್ಲಿ ಸಿಗುವ ಅಪರೂಪದವ್ಯಕ್ತಿ. ಆದ್ದರಿಂದಲೇ ಯಾವಾಗಲೂ ಬಿಡುವಿಲ್ಲದೆ ಓಡಾಡಿಕೊಂಡಿರುವುದು. ಈ ಓಡಾಟ ನಿನ್ನೆ ಮೊನ್ನೆಯದಲ್ಲ. ಸತತವಾಗಿ ನಾಟಕದ ಜನರೊಡನೆ ಮುವತ್ತು ವರ್ಷಗಳನ್ನು ಕಳೆದಿದ್ದಾರೆ. ಎಲ್ಲರಿಗೂ ಪರಿಚಿತ. ಇದು ಈತನ ಶಿಸ್ತಿನಿಂದ ಬಂದದ್ದು. ಬ್ಯಾಕ್‌ಸ್ಟೇಜಿನ ಸ್ವರೂಪದ ಬಗ್ಗೆ ಕಲ್ಪನೆಯನ್ನು ಮೂಡಿಸಿದ ರಾಮಮೂರ್ತಿ ಎಲ್ಲರ ನಾಲಿಗೆಯ ಮೇಲೆ ನಲಿದಾಡಿದ್ದು ಬಯಲು 'ರಂಗಭೂಮಿ'ಯ ಕಲ್ಪನೆ ಬಂದಾಗ. ಇದೇ ಸಂದರ್ಭದಲ್ಲಿ ಕಾರಂತರು ನಮ್ಮ ಭಾವನೆಗಳನ್ನು ಕೆದಕಿದ್ದು. (ಸಂಕ್ರಾಂತಿ, ಈಡಿಪಸ್–ಜೋಕುಮಾರಸ್ವಾಮಿ)

1961ರಲ್ಲಿ ಬೆಂಗಳೂರಿನ ಟೆಲಿಫೋನ್ ಕಾರ್ಖಾನೆಯಲ್ಲಿ ಕೆಲಸ. ಅಲ್ಲಿ ರಂಗಭೂಮಿಯ ರುಚಿ ಬೆಳೆಯಿತಂತೆ. ಬ್ಯಾಕ್‌ಸ್ಟೇಜ್ ಕುರಿತು ಚಿಂತಿಸಿದರು. ರಾಷ್ಟ್ರೀಯ ನಾಟಕ ಶಾಲೆಗೆ ಹೋದರು. ಕಲಿತರು. ಕಲಿಸಿದರು. ಯಾರ್‍ಯಾರ ಮನಸ್ಸಿನಲ್ಲೋ ಈ

ಚೋಟುದ್ದದ ರಾಮಮೂರ್ತಿ ಕುಣಿದಾಡಿದರು. ಇಂದು ನೂರಾರು ಕನಸುಗಳನ್ನು (ರಂಗಭೂಮಿಯ ಬಗ್ಗೆ) ತುಂಬಿಕೊಂಡು ಗಡಿಬಿಡಿಯಿಂದ ಓಡಾಡಿಕೊಂಡಿದ್ದಾರೆ.

ಬೆಳಕಿನ ರಾಮಮೂರ್ತಿ ಬರೀ ಬೆಳಕನ್ನು ಚಿಂತಿಸುವವರಲ್ಲ. ಅದರ ಹಿಂದಿನ ಹೃದಯವನ್ನು ಮಾತಾಡಿಸಬಲ್ಲವರು. ಹೃದಯ ನಿಂತ ಜನಕ್ಕೆ ಚಲನೆಕೊಡಬಲ್ಲವರು. ಎಷ್ಟೋ ಜನ ಚಿಂತೆಗೀಡಾದಾಗ ಸಮಾಧಾನಮಾಡಿ ಮತ್ತೆ ರಂಗದ ಮೇಲೆ ಕುಣಿಸ ಬಲ್ಲವರು. ಆದ್ದರಿಂದಲೇ ಈ ಮನುಷ್ಯ ನಿರ್ದೇಶಿಸಿದ 'ಮೂಕಿ-ಟಾಕಿ' ಹೃದಯ ತುಂಬಿಕೊಂಡಿದ್ದು. ಮೂಕ ನಾಟಕಗಳ ಮಾಧ್ಯಮದ ಬೆಳವಣಿಗೆ ಕುರಿತು ಚಿಂತಿಸುತ್ತ ನಾನಾ ಯೋಜನೆಗಳನ್ನು ತುಂಬಿಕೊಂಡಿರುವ ವ್ಯಕ್ತಿ. ಇದರ ನಡುವೆ ರಾಮಮೂರ್ತಿ ಯವರಿಗೆ ಚಿಂತೆ ಇದೆ, ಅತೃಪ್ತಿ ಇದೆ, ಜನರ ಸಣ್ಣತನಗಳ ಬಗ್ಗೆ ಅಸಡ್ಡೆ ಇದೆ. ಆದರೂ ಸಹಿಸಬೇಕಾಗಿದೆ ಎಂದು ಸಿಗರೇಟಿನ ಹೊಗೆಯ ವರ್ತುಲಗಳಲ್ಲಿ ನರಳುತ್ತಿದ್ದಾ ರೆಂದು ಅನ್ನಿಸದಿರಲಾರದು. ಇಂಥಹವರ ಬದುಕಿಗೆ ಅರ್ಥವಿದೆಯೆಂದು ಭೇಟಿಯಾ ದಾಗಲೆಲ್ಲ ಅಂದುಕೊಂಡಿದ್ದೇನೆ.

ದೇಶ ವಿದೇಶಗಳನ್ನ ಸುತ್ತಿರುವ ರಾಮಮೂರ್ತಿಯವರಿಗೆ ನಮ್ಮಲ್ಲಿ ಥಿಯೇಟರ್ ಟೆಕ್ನಾಲಜಿ ಬೆಳೆದಿಲ್ಲವೆಂಬ ಅತೃಪ್ತಿ ಇದೆ. ರವೀಂದ್ರ ಕಲಾಕ್ಷೇತ್ರವು ತಾಂತ್ರಿಕ ಸವಲತ್ತು ದೃಷ್ಟಿಯಿಂದ ಸ್ವಲ್ಪಮಟ್ಟಿನ ಕೆಲಸವಾಗಿದೆಯಷ್ಟೇ. ನಮ್ಮಲ್ಲಿ ಹೊಸ ಹೊಸ ಟ್ರೆಂಡ್ ಗಳು ಬೆಳೆಯುತ್ತಿವೆ. ಮತ್ತೆ ಹೊಸ ಹೊಸ ತಂಡಗಳು ಬಿಡುವಿಲ್ಲದೆ ನಾಟಕದ ಕೆಲಸ ದಲ್ಲಿ ತೊಡಗಿವೆ. ಆದರೆ ಅವುಗಳ ಆಸೆಗಳನ್ನು ಪೂರೈಸುವ ತಾಂತ್ರಿಕತೆಯು ಬೆಳೆಯ ಬೇಕಾಗಿದೆ.

ಕಾರಂತರ ರೀತಿಯಲ್ಲಿ ವೃತ್ತಿ ರಂಗಭೂಮಿಯನ್ನು ಬೆಳೆಸುವ ಕಳಕಳಿ ಇರುವ ರಾಮಮೂರ್ತಿಯವರು ನಮ್ಮ ನಟರ ಶಿಸ್ತಿನ ಬಗ್ಗೆ ಪ್ರಶ್ನಿಸುತ್ತಾರೆ. ದೆಹಲಿಯ ರೆಪರ್ಟರಿ ತಂಡದ ಸದಸ್ಯರ ರೀತಿಯಲ್ಲಿ ಇಲ್ಲಿಯ ನಟನಟಿಯರು ಬೆಳೆಯಬೇಕಾಗಿದೆ. ನಾನೊಬ್ಬ ಒಳ್ಳೆಯ ನಟನಾಗಬೇಕು ಎಂಬ ಆಂಬಿಷನ್ ಬರದ ಅವನು ನಟನಾಗಲಾರ ಮತ್ತೆ ರಂಗಭೂಮಿಯನ್ನು ಬೆಳೆಸಲಾರ. ಅದರ ಬದಲು ಚಿಲ್ಲರೆ ಪಾಲಿಟಿಕ್ಸ್ ಮಾಡಿ ಕೊಂಡು ಗುಂಪುಕಟ್ಟಲು ತೊಡಗುತ್ತಾನೆ. ಜನರನ್ನು ಕೂಡಿಸಿಕೊಂಡು ಬದುಕಲು ಬರುವುದಿಲ್ಲ, ಇಂಥ ಸಮಯದಲ್ಲಿ ನನ್ನಂಥವನಿಗೆ ಕಿರಿಕಿರಿಯಾಗಬಹುದು ಎಂದು ನೊಂದು ನುಡಿಯುತ್ತಾರೆ. ಹಾಗೆಯೇ ರಂಗಭೂಮಿಯ ಪರಂಪರೆಯನ್ನರಿಯದೆ ಅವನು ಕ್ರಿಯಾಶೀಲನಾಗಲಾರ. ನಮ್ಮಲ್ಲಿಯ ಯಕ್ಷಗಾನ, ಭರತನಾಟ್ಯ, ಕಥಕ್, ಕಥಕ್ಕಳಿಯಂಥ ಮಾಧ್ಯಮಗಳನ್ನು ನೋಡಿದಾಗ ವೈವಿಧ್ಯ ಯಾವ ಯಾವ ಹಂತ

ದಲ್ಲಿ ಬಳಸಿಕೊಳ್ಳಬಹುದು ಎಂಬುದು ಗೋಚರವಾಗುತ್ತೆ. ಒಬ್ಬ ನಟನಾದವನು ಸಂಭಾಷಣೆಗಳನ್ನು ವರದಿ ಒಪ್ಪಿಸುವದಲ್ಲ. ಮೈಕ್ರೋಫೋನನ್ನ ಆಶ್ರಯಿಸುವುದನ್ನ ಬಿಡುವಷ್ಟು ಅದರ ಹಿಂದಿನ ನಾಡಿಯನ್ನು ಹಿಡಿಯಬೇಕಾಗಿದೆ. ಆಗ ಅವನ ದೇಹ ಸಂಭಾಷಣೆಗೆ ಸ್ಪಂದಿಸಬಲ್ಲದು. ನಾವು ಏನೇ ಮಾಡಿದರೂ ಹ್ಯೂಮನ್ ಅಪ್ರೋಚ್ ಇಲ್ಲದಿದ್ದರೆ ಸೋಲುತ್ತೇವೆ. ಈ ದೃಷ್ಟಿಯಿಂದ ಶ್ರೀನಿವಾಸರಾಜುರವರ 'ಮೂಕ ನಾಟಕ'ಗಳು ತುಂಬ ಇಷ್ಟವಾಯಿತು. ಪಾಶ್ಚಿಮಾತ್ಯರು ರಂಗಭೂಮಿಯ ವಿವಿಧ ಸಾಧ್ಯತೆಗಳನ್ನು ಕುರಿತು ಚಿಂತಿಸಿದ್ದರಿಂದ ಅವರಿಗೆ ಮೂರನೆಯ ಸ್ಟೇಜ್‌ನ ಕಲ್ಪನೆ ಬಂತು. ಆದರೆ ನಮ್ಮಲ್ಲಿ 'ನಾಟ್ಯಶಾಸ್ತ್ರ'ವನ್ನು ಬಿಟ್ಟರೆ ನಾಟಕದ ಗ್ರಾಮರನ್ನ ಕುರಿತು ಚಿಂತಿಸಿದವರು ಪಾಶ್ಚಿಮಾತ್ಯರೆ.

ಒಂದು ನಾಟಕವನ್ನ ರಿಹರ್ಸಲ್‌ಗೆ ತೆಗೆದುಕೊಂಡು ನಾಟಕವಾದ ಮೇಲೆ ಕೈ ತೊಳೆದುಕೊಳ್ಳುವುದಲ್ಲ. ಅದೊಂದು ಹೊಸ ಅನುಭವವನ್ನ ಕೊಟ್ಟಿತು ಎನ್ನುವಷ್ಟರ ಮಟ್ಟಿಗೆ ನಾವು ತೊಡಗಬೇಕಾಗಿದೆ. ಈ ರೀತಿಯ ಶಿಸ್ತು ನಿರ್ದೇಶಕನಿಗೂ ಬೇಕಾಗುತ್ತೆ. ನಾನು ಅಮೇರಿಕಾದಲ್ಲಿರುವಾಗ ಡೆಕ್ರೋ-ರೀಡ್‌ಗಿಲ್‌ಬರ್ಟ್ ಮುಂತಾದವರ ಜೊತೆಯಲ್ಲಿ ಕೆಲಸ ಮಾಡಿದ್ದೇನೆ. ಈಗಲೂ ಮರೆಯಲಾರದಂತದ್ದು.

ರಾಮಮೂರ್ತಿಯವರು ಮೈಮ್‌ಗೆ ಸಂಬಂಧಿಸಿದಂತೆ ಕೆಲಸಮಾಡುವ ಆಸೆ. ಮೊದಲು ತುಣುಕುಗಳನ್ನು ತೆಗೆದುಕೊಂಡು ನಂತರ ಪೂರ್ಣಾವಧಿ ನಾಟಕಗಳನ್ನು ಮಾಡಬೇಕೆಂದಿದ್ದರೂ; ಬೆಳಕಿನ ವಿವಿಧ ಸಾಧ್ಯತೆಗಳನ್ನು ವಿಸ್ತರಿಸಿಬೇಕೆಂಬ—ತನ್ನಂತೆ ಚಿಂತಿಸುವ ಜನರನ್ನ ಬೆಳೆಸಬೇಕೆಂಬ ಕಾಳಜಿಯಿರುವ ಇವರು ಪರೇಶ್‌ಕುಮಾರ, ಚಂಕು ಸಿಂಗ್ (ಹೊಸ ನಾಮಕರಣ) ಮತ್ತು ಸಮುದಾಯದ ಕೃಷ್ಣಸ್ವಾಮಿಯನ್ನು ಕಂಡಾಗ ಉತ್ಸಾಹದಿಂದ ಮಾತಾಡುತ್ತಾರೆ.

ಈ ಬ್ರಹ್ಮಚಾರಿ ರಾಮಮೂರ್ತಿಗೆ ಥಿಯೇಟರ್ ಅನ್ನೋದು ಅಪರೂಪದ ಲವರ್. ಕುಡಿತಕ್ಕೆ ಬಲಿಯಾಗದ ಸಿಗರೇಟ್ ಮತ್ತು ಟೀ ಎಂಬ ಮಾದಕ ವಸ್ತುಗಳಿಗೆ ಗಂಟು ಬಿದ್ದಿದ್ದಾರೆ. ಈ ತುಂಬು ಹೃದಯದ ರಾಮಮೂರ್ತಿಯನ್ನು ಯಾರಾದರೂ ದ್ವೇಷಿಸುತ್ತಾರಾ? ಎಂದು ಕೊಂಡಾಗಲೆಲ್ಲ ಇಲ್ಲವೆಂದುಕೊಂಡಿದ್ದೆನೆ. ಆದರೆ ಇವರಿಗೆ ಪ್ರಶಸ್ತಿಕೊಡುವಾಗ ಕೇಂದ್ರದ ಅಕಾಡೆಮಿ ತಕರಾರು ಮಾಡಲಿಲ್ಲ. ಆದರೆ ಇಲ್ಲಿ ನಡೆದ ತಕರಾರನ್ನ ಸ್ವಾರಸ್ಯವಾಗಿ ಹೇಳುತ್ತಾರೆ. ರಾಮಮೂರ್ತಿಯವರ ಸ್ವಾರಸ್ಯಕತೆಗಳನ್ನ ಇಲ್ಲಿ ದಾಖಲುಗೊಳಿಸಲು ಎಂದಾದರೂ ಸಾಧ್ಯವಾದರೆ ನೋಡುವ. ○

# ನಮ್ಮನ್ನು ಪ್ರತಿನಿಧಿಸುವ ಡಾ॥ ಫಾಸ್ಟಸ್

ಕ್ರಿಸ್ಟಫರ್ ಮಾರ್ಲೊ ನಿನ್ನೆ ಮೊನ್ನೆಯವನಲ್ಲ. ಎಲಿಜಬೆತ್‌ನ ನಾಟಕ ಯುಗದ ಮಹಾನ್ ಪುರುಷ. ಮಾರ್ಲೊ ಷೇಕ್ಸ್‌ಪಿಯರನಿಗೆ ತನ್ನ ನಾಟಕಗಳ ಮೂಲಕ ಏನು ಕೊಟ್ಟನೋ ಬಿಟ್ಟನೋ ಎನ್ನುವುದು ಇಲ್ಲಿ ಬೇಡ. ಆದರೂ ಶತಮಾನಗಳು ಕಳೆದರೂ ಮಾರ್ಲೋನ ಡಾ॥ ಫಾಸ್ಟಸ್ ಒಬ್ಬ ಪ್ರೇಕ್ಷಕನ ಮನಸ್ಸನ್ನು ಕದಡುವುದು ಹೆಚ್ಚುಗಾರಿಕೆಯಾಗುತ್ತದೆ. ಮಾರ್ಲೋನ ಫಾಸ್ಟಸ್ ತನ್ನೆಲ್ಲ ಒಳಗುದಿಗಳನ್ನು ಹೊರ ಚೆಲ್ಲುತ್ತಲೇ ನಮಗೆ ನೂರಾರು ಸವಾಲುಗಳನ್ನು ಎಸೆಯುತ್ತ ಹೋಗುತ್ತಾನೆ. ಇಂದು ವಿಜ್ಞಾನಿಯಿಂದ ಮೊದಲುಗೊಂಡು ಸಾಮಾನ್ಯ ಮನುಷ್ಯನವರೆವಿಗೂ ಬದುಕು ಯಕ್ಷಿಣಿ ಸಮಸ್ಯೆಯಾಗಿರುವುದು ನಾವೆಲ್ಲ ಭೂತಗಳ ನಡುವೆ ನರಳುತ್ತಿರುವುದರಿಂದ. ಫಾಸ್ಟಸ್‌ಗೆ ಬಾಧಿಸಿದ ಪಾಪಪ್ರಜ್ಞೆಯಿಂದ ನಾವೆಲ್ಲ ವಂಚಿತರಲ್ಲ.

ಡಾ॥ ಫಾಸ್ಟಸ್ ಮಹಾನ್ ವಿದ್ವಾಂಸ. ವಿಶ್ವದ ಚಲನವಲನಗಳ ಬಗ್ಗೆ ಕುತೂಹಲ ಬೆಳೆಸಿಕೊಂಡವನು. ಆದ್ದರಿಂದಲೇ ಅದರ ಬೇರುಗಳನ್ನು ಹುಡುಕುತ್ತ ಹೋದಂತೆಲ್ಲ ದುರಂತವನ್ನ ಎದುರುಗೊಳ್ಳುತ್ತ ಹೋಗುತ್ತಾನೆ. ಇಲ್ಲಿ ಬರುವ ನರಕ-ಸ್ವರ್ಗ ಅಗೋಚರವಾದದ್ದೇನು ಅಲ್ಲ. ಆದರೆ ಮನುಷ್ಯನ ಸಾತ್ವಿಕ ಬದುಕಿಗೆ ಅಂಟಿಕೊಂಡಿರುವ ಸ್ವರ್ಗದ ಕಲ್ಪನೆ ಗಾಢವಾದದ್ದು. ನಮ್ಮನ್ನು ಆಮಿಷಕ್ಕೆ ಒಡ್ಡುವ ನರಕದ ಬಯಕೆಗಳು–ಅದರೊಟ್ಟಿಗೆ ಪಾಪಪ್ರಜ್ಞೆಯ ಕಲ್ಪನೆಗಳು ಡಾ॥ ಫಾಸ್ಟಸ್ ಮತ್ತು ಮೆಫಿಸ್ಟಾಫಿಲಸ್‌ನ ಮೂಲಕ ವ್ಯಕ್ತವಾಗುತ್ತ ಹೋಗುತ್ತದೆ. ಯಾಕೆಂದರೆ ನರಕ-ಸ್ವರ್ಗದ ಕಲ್ಪನೆ ನಿನ್ನೆಮೊನ್ನೆಯದಲ್ಲ. ನಮ್ಮ ಪ್ರಜ್ಞೆಯ ಒಟ್ಟಿಗೆ ಬೆಳೆದುಬಂದದ್ದು. (ದೇವರು ಧರ್ಮದ ಉದಯ) ಆದ್ದರಿಂದ ನಾಗರೀಕತೆ ಬೆಳೆದಂತೆಲ್ಲ ಮನುಷ್ಯ ಸುಖಿಯಾಗಿಯೇನು ಜೀವಿಸಿಲ್ಲ. ಈ ಎಲ್ಲ ಮೌಲ್ಯಗಳನ್ನು ಮಾರ್ಲೋ ಫಾಸ್ಟಸ್‌ನ ಮೂಲಕ ಹೃದಯ ಬಿಚ್ಚಿ ಹೇಳುತ್ತ ಹೋಗುವುದು. ಹಾಗೆಯೇ ನಾವೆಲ್ಲ ಒಂದಲ್ಲ ಒಂದು ವಿಧದಲ್ಲಿ ಯಕ್ಷಿಣಿ ವಿದ್ವಾಂಸರೇ. ನಮ್ಮ ಒಳ್ಳೆಯದು ಮತ್ತು ಕೆಟ್ಟದ್ದರ ಮುಂದಿರುವುದು ಪರಿಸರವನ್ನು ಗೆಲ್ಲುವುದಕ್ಕಾಗಿ ಅಥವಾ ಮೆಚ್ಚಿಸುವುದಕ್ಕಾಗಿ, ಈ ಗೊಂದಲಗಳ ಮಧ್ಯೆ ಮನುಷ್ಯ ಸಾವಿರಾರು ವರ್ಷ ಬದುಕಿ ಬಂದಿದ್ದಾನೆ. ಇಂಥ ಸಮಸ್ಯೆಗಳನ್ನೊಳಗೊಂಡ ಡಾ॥ ಫಾಸ್ಟಸ್, ಲೋಕನಾಥ್ ಮೂಲಕ ಪ್ರೇಕ್ಷಕರ ಹೃದಯ ತುಂಬಿ

ಕೊಂಡಿದ್ದು ಡಾ॥ ಫಾಸ್ಟಸ್ ನಾಟಕಕ್ಕಿರುವ ಆಳದಿಂದ ಮತ್ತು ಲೋಕನಾಥ್‌ರವರು ತಮ್ಮ ಪ್ರತಿಭೆಯನ್ನು ಪೂರ್ಣವಾಗಿ ಬಿಚ್ಚಿಕೊಳ್ಳಲು ಸಾಧ್ಯವಾದ್ದರಿಂದ. (ಒಂದು ಮಾತು ಹೆಚ್ಚು ಹೇಳಬೇಕೆಂದರೆ: ಕಳೆದ ಒಂದೂವರೆ ದಶಕದಲ್ಲಿ ಲೋಕನಾಥರ ಪೂರ್ಣಾಭಿನಯವನ್ನು ನೋಡಲು ಸಾಧ್ಯವಾಗಿದ್ದು) ಹಾಗೆಯೇ ಮೆಫಿಸ್ಟಾಫಿಲಸ್‌ನ ಪಾತ್ರದಲ್ಲಿ ಶ್ರೀನಿವಾಸ ಪ್ರಭುವಿನ ನಟನೆ ಚೆನ್ನಾಗಿದ್ದರೂ; ಧ್ವನಿಯ ಹಂತದಲ್ಲಿಯೇ ತನ್ನ ಪ್ರತಿಭೆಯನ್ನು ತೋರಿಸುತ್ತಿದ್ದಾನೇನೋ ಎಂದು ಅನ್ನಿಸದಿರಲಾರದು. (ಪಾಪ! ಈ ಮನುಷ್ಯನನ್ನ ಇಲ್ಲಿಯ ತನಕ ಎಲ್ಲರೂ ಭೂತವಾಗಿಯೋ—ಪಾದ್ರಿಯಾಗಿಯೋ ನೋಡುತ್ತಾರೆ.) ಆದರೂ ಒಬ್ಬ ಉತ್ತಮ ನಿರ್ದೇಶಕನ ಕೈಯಲ್ಲಿ ಸವಾಲಾಗುವ ನಟನಾಗಿಯೂ ಬೆಳೆಯಬಹುದು.

ಈ ನಾಟಕದ ಉದ್ದಕ್ಕೂ ಡಿಸ್ಟರ್ಬ್ ಮಾಡಿ ಹೋಗುವ ಗುಡ್ ಏಂಜಲ್ ಮತ್ತು ಈವಿಲ್ ಏಂಜಲ್‌ಗಳನ್ನು ಕಿತ್ತು ಬಿಸಾಕುವ ಸ್ವಾತಂತ್ರ್ಯವನ್ನು ನಿರ್ದೇಶಕಿ ರಾಣಿರಾವ್‌ರವರು ವಹಿಸಿದ್ದರೆ ಅಷ್ಟೇನು ಲಾಸಾಗುತ್ತಿರಲಿಲ್ಲ.

ಡಾ॥ ಫಾಸ್ಟಸ್ ನಾಟಕ ಬಯಸಿದ ಚೌಕಟ್ಟಿನಲ್ಲಿ ಬೆಳಕನ್ನು ನೀಡಿದ SPARK (ಪರೇಶ್‌ಕುಮಾರ್) ಗಿಮಿಕ್ಸ್ ಆಗಿ ಉಳಿಯದೆ ಪ್ರಯೋಗದ ಸಾಧ್ಯತೆಗಳಿಗೆ ವಿಸ್ತಾರ ಹಾಕಿದ್ದು ಮೆಚ್ಚಬೇಕಾಗಿದೆ. ಹಾಗೆಯೇ ಈ ಬೆಳಕನ್ನು ಸ್ವೀಕರಿಸಲು ರಂಗ ಸಜ್ಜಿಕೆಯನ್ನು ವೆಂಕಟಸುಬ್ಬಯ್ಯ ಮತ್ತು ಸತ್ಯಸಂಧ ಚೆನ್ನಾಗಿ ನಿರ್ಮಿಸಿದ್ದರು. ಈ ಎರಡರ ನಡುವೆ ಕಾಮುಕಿಯಾಗಿ ವೈಜಯಂತಿ ಬಂದು ಹೋಗುವ ರೀತಿಯನ್ನು ಮರೆಯಲಾಗುವುದಿಲ್ಲ. (ನಮ್ಮಲ್ಲಿ ಇತ್ತೀಚೆಗೆ ಬಂದ ಕೆಲವೇ ಉತ್ತಮ ನಟಿಯರಲ್ಲಿ........)

ಡಾ॥ ಫಾಸ್ಟಸ್ ಕೆಲವು ದೋಷಗಳ ನಡುವೆ ಒಂದು ಉತ್ತಮ ಪ್ರಯೋಗವೆಂದು ಯಾಕೆ ಹೇಳಬಾರದು ? ○

# ಯಾರ ಹಿತಕ್ಕೆ . . . . ಪಾಷಾಣ ?

ಬೆಂಗಳೂರಿನಲ್ಲಿ ರಂಗಚಟುವಟಿಕೆ ತುಂಬ ಚುರುಕಾಗಿದೆ. ಇದಕ್ಕೆ 'ಕಲಾ ಗಂಗೋತ್ರಿ' ತಂಡದ ಪಾತ್ರವೂ ಇದೆ. ಇವರ 'ಮುಖ್ಯಮಂತ್ರಿ'ಯ ನಂತರ ಒಬ್ಬ ವಿದೂಷಕ ಬೇಕೆನ್ನಿಸಿರಬಹುದು. (ವಿದೂಷಕನೇನೂ ಕೆಟ್ಟವನಲ್ಲವಲ್ಲ) ಆದ್ದರಿಂದ

ಬುದ್ಧಿವಂತ 'ಮುಖ್ಯಮಂತ್ರಿ'ಗೆ ವಿದೂಷಕ ಬೇಕೆಂದು 'ಪರಹಿತ ಪಾಷಾಣ'ವನ್ನ ಪ್ರೇಕ್ಷಕರ ಮುಂದೆ ನಿಲ್ಲಿಸಲು ಪ್ರಯತ್ನಿಸಿದರು.

ನಾವು ತುಂಬಾ ನಗುತ್ತೇವೆ ಅಥವಾ ನಗಬೇಕಾಗಿದೆಯೆಂದರೂ ಅದರ ಹಿಂದಿರುವ ಸಂಬಂಧಗಳು ಹೆಚ್ಚು ಗಾಢವಾಗಿರಬೇಕಾಗುತ್ತೆ. ಇಲ್ಲದಿದ್ದ ಪಕ್ಷದಲ್ಲಿ ಬಲವಂತವಾಗಿ ಕೂತು ಒಂದರ್ಧ ಗಂಟೆ ನಗಬಹುದು—ಜನರ ಚಪ್ಪಾಳೆಯನ್ನು ಸಹಿಸಿಕೊಂಡು ಯಾಕೆಂದರೆ ನಾವು ದಿ|| ಕೈಲಾಸಂ ಸೃಷ್ಟಿಸಿದ ಪರಂಪರೆಯನ್ನು ನೋಡಿದ್ದೇವೆ. ಆದರೆ ಆ ನಗುವನ್ನು ಫುಲ್‌ಲೆಂಗ್ತ್‌ಗೆ ಎಳೆದಾಗ ಬೋರ್‌ಡಮ್‌ಗಳನ್ನು ಮೀರಿ ನಿಲ್ಲುವುದು ಕಷ್ಟ. ಎಂಥ ಉತ್ತಮ ನಟನಟಿಯರಿದ್ದರೂ ಸೀಟಿಗೆ ಅಂಟಿಕೊಂಡು ಕೂರಬಹುದೇ ವಿನಹ ಹೃದಯ ಸ್ಪಂದನವಂತೂ ಸಾಧ್ಯವಿಲ್ಲ.

ಇಂಥ ಒಂದು ಅನುಭವವನ್ನು ಜುಲೈ 17 ರಂದು 'ಪರಹಿತ ಪಾಷಾಣ'ದಿಂದ ಪಡೆಯಬೇಕಾಯಿತು. ಬಿ. ಚಂದ್ರಶೇಖರ್ ಚುರುಕಾಗಿ ಕನ್ನಡದ ಸಂದರ್ಭಕ್ಕೆ ತಂದುಕೊಟ್ಟಿದ್ದರೂ ಅದರ ಸಾರ್ಥಕತೆ ಫಲಿಸುವುದಿಲ್ಲ. ಏಕೆಂದರೆ ಒಂದು ಕಲಾಚಿತ್ರ ಚೆನ್ನಾಗಿರದೆ ಅದರ ಫ್ರೇಮನ್ನು ನೋಡಿ ಹೊರ ಬರಲಾಗುವುದಿಲ್ಲ.

ಅಮೆರಿಕನ್ ನಾಟಕಕಾರ ಜೋಸೆಫ್ ಕೆಸ್ಸೆಲ್‌ರಿಂಗ್‌ನ 'ಆರ್‌ಸೆನಿಕ್ ಅಂಡ್ ಓಲ್ಡ್ ಲೇಸ್' ನಾಟಕದಿಂದ ಬಂದದ್ದು.......ಪಾಷಾಣ'. ಇದರ ಸೀತಮ್ಮ ಮತ್ತು ಅಕ್ಕಯ್ಯಮ್ಮ ಅರವತ್ತರ ಗಡಿಯ ವಿಚಿತ್ರಸ್ವಭಾವದ ಮುದುಕಿಯರು. ಈ ಮುದುಕಿಯರಾಗಿ ಶಾಂತ (ತುಪ್ಪ) ಮತ್ತು ಭಾರ್ಗವಿ ನಾರಾಯಣ್‌ರವರು ಚೆನ್ನಾಗಿ ನಿರ್ವಹಿಸಿದರೂ-ಇವರ ಕೊಳಕುತನದ ಹಿನ್ನಲೆ ರುಜುವಾತಾಗುವುದಿಲ್ಲ. ಒಂದು ಲಾರಿ ತುಂಬುವಷ್ಟು ಘಟನೆಗಳಿದ್ದರೂ ನಮ್ಮನ್ನು ರಂಜಿಸುವುದಿಲ್ಲ. ಆದರೆ ಪ್ರೇಕ್ಷಕರ ಚಪ್ಪಾಳೆ ಮತ್ತು ನಗು ಹಿಂಸೆಯಾಗಿ ಬಿಡುತ್ತದೆ. ಇದು ಬರೀ ಇಂಗ್ಲೀಷ್ ನಾಟಕಗಳಿಗೆ ಮಾತ್ರ ಅಂದುಕೊಂಡಿದ್ದೆ. ಯಾಕೆಂದರೆ ಅಲ್ಲಿಯ ಪ್ರೇಕ್ಷಕರು ನಟ ಅಥವಾ ನಟಿ ಬಾಯಿ ಬಿಡುವ ಮುನ್ನ ನಗಲು ಶುರುಮಾಡಿರುತ್ತಾರೆ. (ಇಂಥ ಸಮಯದಲ್ಲಿ ನಗಲಾರದ ನಾವು ದಡ್ಡರಾಗಿ ಕಾಣಬಹುದು)

'ತೊಘಲಕ್' ಮೂಲಕ ಪರಿಚಯವಾದ ಪ್ರೊ. ಬಿ.ಸಿ.ಯವರು ಅಂತದೇ ಒಂದು ನಾಟಕವನ್ನು ರಂಗದಮೇಲೆ ಯಾಕೆ ತರಬಾರದು ಅನ್ನಿಸುತ್ತೆ

—ಎಸ್.ಎಸ್. ○

# ನಾವು ಮತ್ತು ನಮ್ಮ ಬಣ್ಣದ ಜನ

## ಚಿತ್ರಕಲೆ—ಕೆಲವು ವಿಚಾರಗಳು

**ಒಂದು:—**

ತುಂಬಾ ಹಳೆಯ ಮನೆಗಳಿಗೆ ಹೋದಾಗ ಅದರ ಗೋಡೆಗಳ ಮೇಲೆ ನೇತು ಹಾಕಿರೋ ಕೆಲವು ಚಿತ್ರಪಟಗಳು ಆಕರ್ಷಿಸುತ್ತವೆ. ಪೂರ್ವದ ಅನೇಕ ಚಿತ್ರಗಳು, ದೇವರ ಫೋಟೊಗಳು ದೈವಿಕ ಭಾವನೆಯನ್ನು ಹುಟ್ಟಿಸಿತ್ತೋ ಇಲ್ಲವೋ, ಆದರೆ ಚಿತ್ರದ ಸೌಂದರ್ಯ, ವರ್ಣವಿನ್ಯಾಸ, ಅವನ್ನು ಬರೆಯಲು ಚಿತ್ರಕಾರರು ಪಟ್ಟ ಶ್ರಮ ಇವುಗಳನ್ನು ಕುರಿತಂತೂ ನಮ್ಮಲ್ಲಿ ಮೆಚ್ಚಿಗೆ ಮೂಡಲೇಬೇಕು. ಸಂಪ್ರದಾಯ ಚಿತ್ರಕಲೆಯ ವಸ್ತುವನ್ನು ಅವಲೋಕಿಸಿದಾಗ ಪುರಾಣಿಕ ಕಥೆಗಳು, ರಾಮಾಯಣ ಮಹಾಭಾರತ ಮತ್ತು ಭಾಗವತ ಪುರಾಣ ಹಾಗೂ ಜೈನಗ್ರಂಥಗಳಿಂದ ಆಯ್ದ ಪ್ರಸಂಗಗಳು ಅವುಗಳ ವಸ್ತುವಾಗಿರುವುದು ತಿಳಿಯುತ್ತದೆ. ದೇವಾದಿ ದೇವತೆಗಳು, ಪುರಾಣ ಪುರುಷರು ಹಾಗೂ ಪುರಾಣಗಳಲ್ಲಿ ಉಲ್ಲೇಖಿತವಾಗಿರುವ ಶೌರ್ಯ ಪರಾಕ್ರಮಗಳು, ರಾಜರ ಸಭಾದೃಶ್ಯಗಳು, ಕಾಳಗ ದೃಶ್ಯಗಳು ಅಪರೂಪವೇನಲ್ಲ. ಕನ್ನಡ ನಾಡಿನಲ್ಲಿ ಇಂತಹ ಅನೇಕ ಚಿತ್ರಗಳು ಅಂದಿನ ಮೈಸೂರನ್ನು ಆಳಿದ ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥೆಯಿಂದಾಗಿ ಬರೆಯಲ್ಪಟ್ಟಿವೆ.

ರಾಜಾರವಿವರ್ಮರಿಂದ ಬರೆಯಲ್ಪಟ್ಟ ದೇವ ದೇವತೆಗಳ ಚಿತ್ರಗಳನ್ನು ಸಾಮೂಹಿಕವಾಗಿ ಲಿಥೋ ಮುದ್ರಣದಲ್ಲಿ ಹೊರತಂದಿದ್ದರಿಂದ ದಕ್ಷಿಣದಲ್ಲಿ ಸಂಪ್ರದಾಯ ಚಿತ್ರಕಲೆ ಕುಂಠಿತಗೊಂಡಿತು. ಅವನ್ನು ಪುನರ್ಮುದ್ರಿಸುವ ಖಯಾಲಿ ಹಾಗೂ ಅಧಿಕ ಪ್ರಮಾಣದಲ್ಲಿ ಹೊರಬಂದ ಕಡಿಮೆ ಬೆಲೆಯ ಅದರ ಪ್ರತಿಗಳು ಚಿತ್ರಕಲೆ ರಸಿಕರು ಮತ್ತು ಸಾಮಾನ್ಯಜನ ಸಂಪ್ರದಾಯಿಕ ಚಿತ್ರಕಲೆಗೆ ನೀಡಲಾಗಿದ್ದ ಪ್ರೋತ್ಸಾಹವನ್ನು ನಾಶಮಾಡಿದವು.

ಸಂಪ್ರದಾಯಸ್ಥ ಚಿತ್ರಕಲೆಯ ಅತ್ಯಂತ ಜನಪ್ರಿಯ ವಸ್ತುವೆಂದರೆ ರಾಜರಾಜೇಶ್ವರಿ ಮತ್ತು ಶ್ರೀರಾಮ ಪಟ್ಟಾಭಿಷೇಕ. ರಾಜರಾಜೇಶ್ವರಿ ಶ್ರೀರಾಮ ಪಟ್ಟಾಭಿಷೇಕದ ಚಿತ್ರ ಭಜನೆ ಮಂದಿರಗಳನ್ನು ಅಲಂಕರಿಸಿವೆ. ತನ್ನ ಭಕ್ತ ಹನುಮಂತನಿಂದ ಕಾಲನ್ನು ಒತ್ತಿಸಿಕೊಳ್ಳುತ್ತಿರುವ ಅಕ್ಕಪಕ್ಕದಲ್ಲಿ ಸೀತಾಲಕ್ಷ್ಮಣರನ್ನು ನಿಲ್ಲಿಸಿಕೊಂಡಿರುವ ಕೋದಂಡ ರಾಮ ಚಿತ್ರವೂ ಕೆಲವು ಮನೆಗಳಲ್ಲಿ ಇಂದಿಗೂ ಇವೆ. ಶಿವಪುರಾಣ, ರಾಮಾಯಣ, ಮತ್ತು ಇವರ ಚಿತ್ರಗಳು ಹೆಚ್ಚಾಗಿವೆ. ಭಗವದ್ಗೀತೆಯಲ್ಲಿ ವಿವರಿಸಲಾಗಿರುವ ವಿಶ್ವರೂಪ ದರ್ಶನ, ಭಾಗವತ ಪುರಾಣದ ಸಮುದ್ರಮಂಥನ ಮತ್ತು ವಿಷ್ಣುವಿನ ದಶಾವತಾರ ಬುದ್ಧಿವಂತರನ್ನೇ ಅಲ್ಲದೆ ಸಾಮಾನ್ಯ ಜನರನ್ನೂ ತಮ್ಮ ಶ್ರೀಮಂತ ಕಲ್ಪನಾಶಕ್ತಿ ಪೌರಾಣಿಕ ಕತೆಗಳನ್ನು ವಿವರಿಸುವ ರೀತಿ, ವರ್ಣ ವಿನ್ಯಾಸಗಳ ಮೂಲಕ ಮನಸೆಳೆಯುತ್ತವೆ. 18ನೇ ಶತಮಾನದಲ್ಲಿ ಚಿತ್ರಕಲೆಯನ್ನು ಕಸುಬನ್ನಾಗಿ ಮಾಡಿಕೊಂಡರೂ ಕಸಬುದಾರರ ಚಾಕಚಕ್ಯತೆಯಿಂದಾಗಿ ಚಿತ್ರಕಲೆ ಜನಪ್ರಿಯವಾಗಿತ್ತು.

**ಎರಡು:—**

ಚೆಲುವನ್ನು ಆಸ್ವಾದಿಸುವ ಹೆಬ್ಬಯಕೆ, ತನಗೆ ಚೆಲುವೆನ್ನಿಸಿದ್ದನ್ನೆಲ್ಲ ಅಭಿವ್ಯಕ್ತಗೊಳಿಸುವ ತೀವ್ರ ಹಂಬಲ ಮನುಷ್ಯನಿಗೆ ತೀರಾ ಸ್ವಭಾವಿಕ ಎನ್ನುವುದನ್ನು ಪುಷ್ಟೀಕರಿಸಲು ಚಿತ್ರಕಲೆ ಕ್ಷೇತ್ರವನ್ನು ಆಯ್ಕೆ ಮಾಡಬಹುದು.

ಆದಿ ಮಾನವನನ್ನು ನಮ್ಮ ಮೂಲಪುರುಷನನ್ನಾಗಿ ಇಟ್ಟುಕೊಂಡರೆ ಅವನಲ್ಲೂ ಕಲೆಯ ಬಗ್ಗೆ ಆಸಕ್ತಿ ಮೊಳೆದಿತ್ತು ಎನ್ನುವುದು ಭಾರತ, ಸುಮೇರಿಯಂ, ಈಜಿಪ್ಟ್, ಗಳಂಥ ಪುರಾತನ ದೇಶಗಳ ಗೋಡೆಗಳಲ್ಲಿ, ಗುಹೆಗಳಲ್ಲಿ ಇಂದಿಗೂ ಮಾಸಲಾಗಿ ಉಳಿದುಕೊಂಡಿರುವ ಚಿತ್ರಗಳಿಂದ ಗೋಚರವಾಗುತ್ತದೆ.

ನಾಗರಿಕತೆಯ ಸೋಂಕಿಲ್ಲದೆಯೆ ಇಂದೂ ತಮ್ಮ ರೀತಿಯಲ್ಲೆ ಬದುಕುತ್ತಿರುವ ಆಸ್ಟ್ರೇಲಿಯದ ಆದಿವಾಸಿಗಳು, ಆಫ್ರಿಕದ ಪೊದೆ ವಾಸಿಗಳು ಚಿತ್ರಕಲೆ ಉಗಮಕ್ಕೆ ಕಾರಣರು. ಯುರೋಪಿನಲ್ಲಿ ಆದಿ ಮಾನವರು ಸಾಧಿಸಿದ್ದು, ಸ್ಪೈಯಿನ್ ಮತ್ತು ಈಗಿನ ಫ್ರಾನ್ಸ್ ದೇಶಗಳಲ್ಲಿನ ಅನೇಕ ತಾಣಗಳನ್ನು ತಮಗೆ ಅರಿವಿಲ್ಲದೆಯೆ ಚಿತ್ರಕಲೆಯ ಆಗರಗಳನ್ನಾಗಿಸಿದ್ದು ಅವರ ರಸಗ್ರಹಣಕ್ಕೆ ದ್ಯೋತಕ. ಅಶೋಕ, ಬುದ್ಧರ ಕಾಲಗಳಿಂದ ಗುಡ್ಡ ಬೆಟ್ಟಗಳಲ್ಲಿ, ಸಂದುಗೊಂದುಗಳಲ್ಲಿ ಚಿತ್ರಗಳು ಬಿಡಿಸಲ್ಪಟ್ಟಿವೆ.

ಆದಿಮಾನವರು ಚಿತ್ರಕಲೆಯ ಬಗ್ಗೆ ಬೆಳೆಸಿಕೊಂಡಿದ್ದ ಅಭಿರುಚಿಗೆ ಇಂಬುಕೊಡುವಂತದ್ದು ಫ್ರಾನ್ಸಿನ ಡಾರ್ಡೋನ್ ನದಿ ಕಂದರದಲ್ಲಿನ ಅನೇಕ ಗುಹೆಗಳು. ಸುಣ್ಣದ

ಕಲ್ಲಿನ ಪರ್ವತಗಳು ಬಿರುಕುಗೊಂಡು ನಿರ್ಮಾಣವಾಗಿರುವ ಗುಪ್ತ ಸುರಂಗಗಳಲ್ಲಿ ಚಿತ್ರ ರಚಿಸಿರುವ ಜನರಿಗೆ ಚರಿತ್ರೆಯಲ್ಲಿ ಕ್ರೊಮೆಗ್ನನ್ ಜನರೆಂದು ಹೆಸರು. ದಕ್ಷಿಣ ಯೂರೋಪಿನ ಹಲವೆಡೆಗಳಲ್ಲಿ ಹೆಚ್ಚಾಗಿ ಸ್ಪೈಯಿನ್, ದಕ್ಷಿಣ ಫ್ರಾನ್ಸ್ ದೇಶಗಳಲ್ಲಿ ವಾಸವಾಗಿದ್ದ ಈ ಜನ 70ಕ್ಕೂ ಹೆಚ್ಚಿನ ಗುಹೆಗಳಲ್ಲಿ ಕ್ರಿ.ಪೂ. 28,000 ದಿಂದ ಕ್ರಿ.ಪೂ. 10,000 ವರ್ಷಗಳವರೆಗೆ ಈ ಚಿತ್ರಗಳನ್ನು ಬರೆದಿರಬಹುದೆಂದು ಊಹೆ.

ಬಹುಶಃ ಇನ್ನೊಬ್ಬರ ಪ್ರಶಂಸೆಗೆ ಹಾತೊರೆಯದೆಯೇ ಈ ಜನ ತಮ್ಮಷ್ಟಕ್ಕೆ ತಾವೇ ಮೂಡಿಸುವ ಚಿತ್ರಗಳು ಕಣ್ಣಿನ ಪಂಕ್ತಿಗಿಂತ ಎತ್ತರದಲ್ಲಿ ಗೋಡೆಗಳ ಎತ್ತರದಲ್ಲಿ ಗೋಡೆಗಳ ಮುಚ್ಚಿಗೆಗಳಲ್ಲಿ ಅಡಗಿ ಕೂತಿವೆ. ಬಣ್ಣದ ಪುಡಿಗಳನ್ನು ಕೊಬ್ಬಿನಲ್ಲಿ ಅರೆದು ಅವುಗಳಿಂದ ಬಣ್ಣದ ಕಡ್ಡಿಗಳನ್ನು ತಯಾರಿಸಿ ರೇಖೆಗಳಿಗೆ ಕಡ್ಡಿಗಳಿಗೆ ಕೊನೆಯನ್ನು ಉಪಯೋಗಿಸಿ ಛಾಯೆಗಳನ್ನು ಅವುಗಳ ಮೈಯನ್ನು ಬಳಸಿ ಚಿತ್ರವನ್ನು ಇವರು ವರ್ಣಮಯವಾಗಿಸಿದ್ದಾರೆ ಎನ್ನಲಾಗಿದೆ. ಇಂಥ ಸಾವಿರಾರು ಚಿತ್ರಗಳು ಲಾಸ್ಕೊ, ಅಲ್ಟಿಮಾರ, ಲಾಎನ್ಸಿಸ್ ನೈಸರ್ಗಿಕ ಗುಹೆಗಳಲ್ಲಿವೆ.

ಇನ್ನು ವಸ್ತು, ಆದಿಮಾನವರಿಗೆ ತಾವು ಬೇಟೆಯಾಡುವ ಪ್ರಾಣಿಗಳೇ ಚಿತ್ರಕ್ಕೆ ಸ್ಫೂರ್ತಿದಾಯಕವಾಗಿದ್ದಿರಬಹುದು. ಕಾಟಿ, ಹಂದಿ, ಕುದುರೆ, ಜಿಂಕೆ, ರೋಮವಿರುವ ಖಡ್ಗಮೃಗ, ಆನೆ. ಇಂಥ ಬಲಿಷ್ಠ ಪ್ರಾಣಿಗಳ ಚಿತ್ರಣ. ಈ ಜನ ಚಿತ್ರಕಲೆಯನ್ನು ಮಾಟ ಮದ್ದಿಗೆ ಉಪಯೋಗಿಸಿಕೊಂಡು ತಾವು ದಿನವೂ ಎದುರಿಸಬೇಕಾದ ಪ್ರಾಣಿಗಳ ಮೇಲೆ ಗೆಲುವನ್ನು ಸಾಧಿಸಲು ಅನುಸರಿಸಿದ ಪೂಜಾವಿಧಾನ ಇದು ಎಂದು ಹೇಳಿರುವುದುಂಟು.

ಕಾಡುಪ್ರಾಣಿಗಳು ಉತ್ತರ ಪೂರ್ವ ದೇಶಗಳಿಗೆ ವಲಸೆ ಹೋಗಿ ಅವುಗಳ ವಿಸ್ತಾರ ಕಡಿಮೆಯಾದಾಗ ಈ ಜನ ಪ್ರಾಣಿ ಸಮೃದ್ಧಿಗಾಗಿ ಪ್ರಾರ್ಥಿಸಿ ಅವುಗಳ ಚಿತ್ರಣವನ್ನು ಬರೆದರೆನ್ನಲಾಗಿದೆ,

ಆಲ್ಜೀರ್ಸ್ ದೇಶದಿಂದ 900 ಮೈಲಿ ದೂರದಲ್ಲಿರುವ ಟಾಸಲಿ-ನ-ಅಜೇರ್ ಎಂಬ ಪ್ರಸ್ಥಭೂಮಿಯ ಗುಡ್ಡಗಳ ಬಂಡೆಗಳ ಮೇಲೆಲ್ಲ ಬಣ್ಣ ತುಂಬಿದ, ಲಲಿತ ರೇಖೆಗಳ ಪ್ರಾಣಿಗಳ ಆಕಾರದ ಸಾವಿರಾರು ಮಾನಸಿಕ ಚಿತ್ರಗಳು. ಈ ಚಿತ್ರಗಳ ಕಾಲ ವ್ಯಾಪ್ತಿ ಕ್ರಿ.ಪೂ. 4,000 ದಿಂದ ಪ್ರಾರಂಭ. ಮುಂದೆ ಅಲ್ಲಿ ಜನ ನೆಲೆಸಿದರು. ಪಶು ಪ್ರಾಣಿ ಮುಂತಾದುವನ್ನು ಸಾಕಿ, ಬಟ್ಟೆ ಒಡವೆ ಧರಿಸಿ ದೇಹಶೃಂಗಾರ ಮಾಡಿಕೊಳ್ಳುವುದನ್ನು ಕಲಿಯುವ ತನಕವೂ, ಅಂದರೆ ಕ್ರಿ.ಪೂ. 1,000 ದವರೆಗೂ ಅವರು ಚಿತ್ರ

ಬರೆದರು. ಆದ್ದರಿಂದಲೇ ಈ ಅವಧಿಯ ಚಿತ್ರಗಳಲ್ಲಿನ ವಸ್ತು ಪಶುಪಾಲನೆ, ಕುರಿ ಸಾಕಣೆ, ಬಿತ್ತನೆ, ಯಾತದಿಂದ ನೀರಾವರಿ ಇಂತಹ ನಿತ್ಯ ಜೀವನ ಪ್ರಸಂಗಗಳು.

ಕ್ರಮೇಣ ಈ ಚಿತ್ರಗಳ ಶೈಲಿಯೂ ಬದಲಾಯಿತು. ನಾಜೂಕು ಅವರ ಗೆರೆಗಳಲ್ಲಿ ತಲೆದೋರಿತು. ಬಟ್ಟೆ ತೊಡಲು, ನೃತ್ಯಗೀತೆಗಳಲ್ಲಿ ಮನಸ್ಸಿಡಲು ಕಲಿತ ಇವರು ಅವಾಸ್ತವಿಕ ಎನ್ನಿಸದಂಥ ಉದ್ದೇಶಪೂರ್ವಕವಾದ ನಿಗೂಢ ಭಾವವನ್ನು ಚಿತ್ರಗಳಲ್ಲಿ ತೋರಿಸಲು ಪ್ರಯತ್ನಿಸಿದರು.

ಇಂಡಿಯಾದಲ್ಲಿನ ಆದಿವಾಸಿಗಳೂ ಸಹ ಚಿತ್ರ ಬರೆದದ್ದು ನೈಸರ್ಗಿಕ ಗುಹೆಗಳಲ್ಲಿ, ಬಂಡೆಯಾಸರೆಗಳಲ್ಲಿ. ಉತ್ತರ ಪ್ರದೇಶದ ಮಿರ್ಜಾಪುರ, ಬಂಡಾ ಎಂಬೆಡೆಗಳಲ್ಲಿ ಬುಂದೇಲಖಂಡದ ಮಹಾದೇವ ಪರ್ವತದಲ್ಲಿ, ಸಾಂಚಿ-ಭೋಪಾಲಗಳ ಮಧ್ಯದಲ್ಲಿನ ಕೆಲವು ಜಾಗಗಳಲ್ಲಿ, ಬಾಗಲಖಂಡದ ಕೈಮೂರು ಬೆಟ್ಟಗಳಲ್ಲಿ, ಮಧ್ಯಪ್ರದೇಶದ ಅನೇಕ ಕಡೆ ಇವರು ಬರೆದ ಚಿತ್ರಗಳನ್ನು ನೋಡಬಹುದು. ಕರ್ನಾಟಕದ ರಾಯಚೂರು, ಬಳ್ಳಾರಿ ಜಿಲ್ಲೆಗಳ ಗುಡ್ಡಗಾಡುಗಳಲ್ಲಿಯೂ ಸಹ ಇಂಥ ಚಿತ್ರಗಳಿವೆ. ವಸ್ತು, ಸುತ್ತಮುತ್ತಲಿನ ವನ್ಯಮೃಗಗಳು, ಸಾಧುಪ್ರಾಣಿಗಳು, ಅವನ್ನು ಬೇಟೆಯಾಡುತ್ತಿದ್ದ ಮನುಷ್ಯರು, ನೆರವಾಗುತ್ತಿದ್ದ ಸಾಕುನಾಯಿಗಳು, ಬಂಡೆಗಳ ಮರೆಯಲ್ಲಿನ ಈ ಚಿತ್ರಗಳು ಕಳೆದ 20,000 ವರ್ಷಗಳಷ್ಟು ಹಿಂದಿನ ಚರಿತ್ರೆಯನ್ನು ಬಿಚ್ಚಿಡುತ್ತವೆ. ○

ಒಂದು ಕಾಲಕ್ಕೆ ಚಿತ್ರಕಲೆಗೆ ಸಂಬಂಧಿಸಿದಂತೆ ನಮ್ಮಲ್ಲಿ ಮಂಡಿವಂತಿಕೆ ತುಂಬಿತ್ತು. ಆದರೆ ಇಂದು ಸುಮಾರಾಗಿ ಬಣ್ಣ ಬಿಡಿಸುವವನೂ ಕೂಡ ಹೆಮ್ಮೆಯಿಂದ ಓಡಾಡುತ್ತಾನೆ. ಆದ್ದರಿಂದಲೇ ಇಲ್ಲಿ ಒಂದು ರೀತಿಯ ಪೈಪೋಟಿ. ಈ ಪೈಪೋಟಿ ಸೃಜನಾತ್ಮಕವಾಗಿದ್ದರೆ ಎಷ್ಟು ಚೆನ್ನ ಅನ್ನಿಸುತ್ತೆ—ಸಂ :

# ಕಮಲೇಶರ ಅಲೆದಾಟದಲ್ಲಿ ಕಂಡದ್ದು . . .

ಇತಿಹಾಸವನ್ನು ಕುರಿತು ಮಾತಾಡಿದ್ದನ್ನ ಮತ್ತೆ ಮತ್ತೆ ತಿದ್ದಿ ಬರೆಯಬಹುದು, ಓದುಗರ ಮನಸ್ಸಿನಾಳದಲ್ಲಿ ಮುದ್ರೆಯೊತ್ತಿ ನೆನಪಿನಾಳದಲ್ಲಿ ಮರುಕೊಳಿಸಬಹುದು. ಇದನ್ನೆಲ್ಲ ಮಾಡುವ ಕ್ರಿಯೆಯ ಹಿಂದಿರುವ ಸೃಜನ ಶೀಲತೆಯನ್ನ ಮರೆಯುವಂತಿಲ್ಲ. ಆದರೆ ಬಣ್ಣಗಳಲ್ಲಿ ಕೆಲಸಮಾಡುವ ಕಲಾವಿದನಿಗೆ ಇದಕ್ಕಿಂತ ಮಿಗಿಲಾದ ಸೃಜನಶೀಲತೆ ಮತ್ತು ಏಕಾಗ್ರತೆ ಬೇಕಾಗುತ್ತೆ. ಇಲ್ಲದಿದ್ದಲ್ಲಿ ಇತಿಹಾಸದ ಘಟನೆಗಳನ್ನು ದಾಖಲು ಗೊಳಿಸಲು ಸಾಧ್ಯವಾಗದೇನೋ.




ಬಾದಾರಪುರ್ ಸರಾಯ್

ನಮ್ಮಲ್ಲಿಯ ಕೆಲವೇ ಉತ್ತಮ ಕಲಾವಿದರಲ್ಲಿ ಕಮಲೇಶ್ ಸಹಾ ಒಬ್ಬರು. ಅವರ ಇತ್ತೀಚಿನ ಸ್ಕೆಚಸ್‌ನ್ನ ನೋಡಿದಾಗ ಮೊಘಲ್ ಸಾಮ್ರಾಜ್ಯದ ವೈಭವದ ನೆನಪು ಬಂತು. ಮೊಘಲ್ ದೊರೆಗಳು ಕ್ರೂರಿಗಳಿರಬಹುದು; ವಿಲಾಸಿಗಳಿರಬಹುದು. ಇನ್ನು ಏನೇನೋ ಕಾಣಿಸಬಹುದು ಆದರೆ ಅದು ಇಲ್ಲಿ ಮುಖ್ಯವಲ್ಲ. ಅವರ ಆಡಳಿತ ವೈಖರಿಯಲ್ಲಿ ನಿರ್ಮಾಣಗೊಂಡ ಸ್ಮಾರಕಗಳು ಸಾಂಸ್ಕೃತಿಕವಾಗಿ ಮುಖ್ಯ ಎಂಬುದನ್ನು ಒಪ್ಪಬೇಕಾಗುತ್ತೆ.

ನಾವು ದೆಹಲಿ, ಆಗ್ರಾ, ಮತ್ತು ಫತೇಪುರ್ ಸಿಖ್ರಿಯನ್ನು ಸುತ್ತುವಾಗ ಕಳೆದು ಹೋದ ಘಟನೆಗಳ ಬಗ್ಗೆ ಅಭಿಮಾನವಿರುವ ಯಾವನೇ ಆಗಲಿ "ಅವರು ಎಷ್ಟು ಚೆನ್ನಾಗಿ

ಬಾಳಿದರು" ಎಂದು ಅಂದುಕೊಳ್ಳದಿರಲಾರ. ಇಂಥದೇ ಭಾವನೆಯನ್ನು ಕಮಲೇಶ್‌ರವರ ಚಿತ್ರಗಳನ್ನು ನೋಡುವಾಗ ಅನ್ನಿಸದಿರಲಾರದು. ಪ್ರದರ್ಶನಕ್ಕೆ ರೂಪಿಸಲಾದ ಸುಮಾರು 98 ಸ್ಕೆಚಸ್‌ನಲ್ಲಿಯ ಜೀವಂತಿಕೆಯನ್ನು ನಾವು ನೇರ ನೋಡಿದಷ್ಟೇ ಖುಷಿಯಾಗುತ್ತೆ. ಒಬ್ಬ ಮನುಷ್ಯನ ಮಾನಸಿಕ ಸ್ತರದಲ್ಲಿ ಮೂಡಬಹುದಾದ ಕೆಲಸವನು ಇಲ್ಲಿಯ ಬಹಳಷ್ಟು ಚಿತ್ರಗಳು ಮಾಡುತ್ತವೆ.

ದೆಹಲಿಯ ಸುತ್ತ ಮುತ್ತ ಸುತ್ತಾಡಿ ಚಾರಿತ್ರಿಕವಾಗಿ ಅಲ್ಲಿಯ ಸ್ಮಾರಕಗಳ ಮಹತ್ವವನ್ನರಿತ ಕಮಲೇಶ್ ಅಲ್ಲಿಯ ವಾಸ್ತವತೆಯನ್ನು ಕಪ್ಪು ಮಸಿಯ ಗೆರೆಗಳಲ್ಲಿ ಬಿಂಬಿಸಲು ಶ್ರಮಿಸಿದ್ದಾರೆ. ಸುಮಾರು ನಲವತ್ತು ದಿನಗಳಲ್ಲಿ ಈ ಕೆಲಸವನ್ನು ಪೂರೈಸಲು ಸಾಧ್ಯವಾಗಿದೆ. (ಇದರ ನಡುವೆ ಇವರ ಕುಂಚಕ್ಕೆ ಎಟುಕದ ಎಷ್ಟೋ ಮರೆಯಾಗಿರಬಹುದು.) ಇಂಥ ಪೂರೈಕೆಯ ಸಮಯದಲ್ಲಿ ವಾಸ್ತತೆಗೆ ಧಕ್ಕೆಬರುವುದು ಜಾಸ್ತಿ. ಆದರೆ ಕಮಲೇಶರವರು ಎಚ್ಚರಿಕೆಯಿಂದ ನಿರ್ವಹಿಸಿರುವುದರಿಂದ ಅಂಥ ವಿರೋಧಾಬಾಸಗಳ ಘಟಿಸಿಲ್ಲ.

ನಾವೆಲ್ಲ ತಾಜ್‌ಮಹಲ್‌ನ್ನ ಕನ್ನಡಿಯ ಮುಂದೆ ನಿಂತು ನೊಡುವ ಹಾಗೆ ನ್ನೋಡುತ್ತೇವೆ. ಆದರೆ ಕಮಲೇಶ್‌ರವರು ಅದನ್ನು ಬೇರೊಂದು ಧಿಕ್ಕಿನಿಂದ ನೋಡಿರುವುದರಿಂದ ಅದರ ಸೌಂದರ್ಯ ಕಲಾಕೃತಿಯಲ್ಲಿ ಭಿನ್ನರೀತಿಯಲ್ಲಿ ಮೂಡಲು ಸಾಧ್ಯವಾಗಿದೆ. ಇಲ್ಲಿಯ ಗೋರಿಗಳಿಗೆ, ಗೋಪುರಗಳಿಗೆ ಕಮಲೇಶರ ಗೆರೆಗಳು ಜೀವ ತುಂಬಿದೆ.

ಫತೇಪುರ್ ಸಿಖ್ರಿಯ ನವಬತ್‌ಖಾನಾ, ರಂಗಮಹಲ್, ಹಿರನ್‌ಮಿನಾರ್ ತಾನ್‌ಸೇನನ ಬಿರಾದರಿ ಹಾಗೆಯೇ ಜೋದ್‌ಬಾಯ್‌ನ ಅರಮನೆ ಮುಂತಾದುವುದಗಳನ್ನು ನೋಡುವಾಗ ಅಕ್ಬರನ ವೈಭವದ ನೆನಪು ಬರುತ್ತೆ. ಇದರ ಜೊತೆಗೆ ತೊಘಲಕ್‌ಬಾದಿನ ಕೋಟೆ, ಜಮಾಮಸೀದ್, ತಲಾಕಿ ದರವಾಜ, ಹುಮಾಯುನ್ ದರವಾಜ ಮುಂತಾದುವು ಮತ್ತೆ ಮತ್ತೆ ನೋಡಿಸಿಕೊಳ್ಳುತ್ತವೆ.

ದೆಹಲಿ ಮತ್ತು ಅದರ ಸುತ್ತ ಮುತ್ತಲ ಮೊಘಲ್ ದೊರೆಗಳ ಇತಿಹಾಸವನ್ನು ಕುರಿತು ಕನ್ನಡದಲ್ಲಿ ಬರೆಯುವವರಿಗೆ ಕಮಲೇಶ್‌ರವರ ಸ್ಕೆಚೆಸ್ ಅಮೂಲ್ಯ ಕೊಡುಗೆಯಾಗಬಹುದು.

—ಎಸ್.ಎಸ್.

# ಹಡಪದ್ ಅವರ ಕೆಲವು ವಿಚಾರಗಳು

1 ನಮ್ಮ ಕಲೆಯ ಕ್ಷೇತ್ರದ ಮುಖ್ಯ ಸಮಸ್ಯೆ ಎಂದರೆ, ಕಲೆಯ ಇತಿಹಾಸವನ್ನು ಸರಿಯಾದ ಬಗೆಯಲ್ಲಿ ರಚಿಸದೇ ಇರುವುದು. ಹಾಗೂ ಆ ಇತಿಹಾಸವನ್ನು ರಚಿಸುವ ಪ್ರಯತ್ನಗಳೂ ಸರಿಯಾದ ಗ್ರಹಿಕೆಯನ್ನು ಹೊಂದಿಲ್ಲ. ಇದರಿಂದ ಕಲಾವಿದನಿಗೂ ತೊಂದರೆಯಾಗಿದೆ; ಕಲೆಯನ್ನು ಕುರಿತು ಚಿಂತಿಸುವವರಿಗೆ, ಸಹೃದಯರಿಗೆ ಹೀಗೆ ಎಲ್ಲರಿಗೂ ಎಡರುಗಳು ಉಂಟಾಗಿವೆ. ಆಧುನಿಕ ಕಲೆ (Modern art) ಬಗ್ಗೆ ಇರುವ ಗೊಂದಲವನ್ನೇ ನೋಡಬಹುದು. ಕಲಾವಿದರಿಗೆ, ನೋಟಕರಿಗೆ ಇಬ್ಬರಿಗೂ ಕೂಡಿಯೇ 'ಅರ್ಥಹೀನರಚನೆ'ಯನ್ನೇ ಆಧುನಿಕ ಕಲೆ ಎಂದು ತಿಳಿಯುವುದು ಸಾಧ್ಯವಾಗಿರುವುದು. ಕಲೆಯ ಇತಿಹಾಸವನ್ನು ಅರಿಯದೇ ಇದ್ದುದರಿಂದ ಎಂಬುದನ್ನು, ಗಮನಿಸಬೇಕು. ಆಧುನಿಕ ಕಲೆಯ ವಕ್ತಾರರೂ ಪೂರ್ವ ಕಲಾಪ್ರಸ್ಥಾನಗಳನ್ನು, ಉದಾಹರಣೆಗೆ ವಾಸ್ತವವಾದಿ ಮಾರ್ಗವನ್ನು ಗೇಲಿ ಎಬ್ಬಿಸುವುದುಂಟು. ಇದೂ ನಿರುಪಯೋಗಿ; ಹಾಗೂ ಯೋಗ್ಯ ವಿಚಾರವಲ್ಲ. ಯಾವ ಮಾರ್ಗವನ್ನು ಕುರಿತು ಟೀಕಿಸಬೇಕಾದರೂ

---

ರುದ್ರಪ್ಪ ಮಲ್ಲಪ್ಪ ಹಡಪದ್ ನಮ್ಮ ಕೆಲವೇ ಉತ್ತಮ ಕಲಾವಿದರಲ್ಲಿ ಒಬ್ಬರು. ಇವರ ಬೆಂಗಳೂರಿನ ಕೆನ್ ಕಲಾಶಾಲೆ ಕಲೆಯ ವಿಚಾರದಲ್ಲಿ ಸಾಧಿಸಿರುವುದು ಅಪಾರ. ಈ ಶಾಲೆಯಿಂದ ಹೊರಬಂದ ವಿದ್ಯಾರ್ಥಿಗಳಲ್ಲಿ ಶಿಸ್ತು ಮತ್ತು ಚೌಕಟ್ಟನ್ನು ಗುರ್ತಿಸಬಹುದು. ಹಡಪದ್‌ರವರು ದೊಡ್ಡ ಕಲಾವಿದರಾಗಿರುವುದರ ಜೊತೆಗೆ ತಮ್ಮ ಕ್ಷೇತ್ರದ ಬಗ್ಗೆ ಅಚ್ಚುಕಟ್ಟಾಗಿ ಮಾತನಾಡಬಲ್ಲವರು. ಆದ್ದರಿಂದಲೇ ಕೆನ್ ಶಾಲೆಯ ಮುಖ್ಯಸ್ಥರೆನ್ನುವುದಕ್ಕಿಂತ ನಮ್ಮಂಥವರಿಗೆ ಒಳ್ಳೆಯ ಮೇಸ್ಟ್ರು ಕೂಡ. ಹಡಪದ್‌ರವರ ವಿಚಾರಗಳನ್ನು ಕೆ. ವಿ. ನಾರಾಯಣ್‌ರವರು ಶೂದ್ರಕ್ಕೆ ಸಿದ್ಧಪಡಿಸಿದ್ದಾರೆ. ಮುಂದೆ ಎಂದಾದರೂ ನಮ್ಮ ಚಿತ್ರಕಲೆಯಲ್ಲಿ ತೊಡಗಿರುವವರ ಬಗ್ಗೆ ವಿಮರ್ಶಾತ್ಮಕ ವಿಚಾರಗಳನ್ನು ಹಡಪದ್‌ರವರಿಂದ ಮಂಡಿಸಲಾಗುವುದು. ಈ ಸಂಚಿಕೆಯಿಂದ ಚಿತ್ರಕಲೆಗೆ ಸಂಬಂಧಿಸಿದಂತೆ 'ನಾವು ಮತ್ತು ನಮ್ಮ ಬಣ್ಣದ ಜನ' ವೇದಿಕೆಯ ಕೆಳಗೆ ಒಂದಷ್ಟು ವಿಷಯಗಳನ್ನು ಚರ್ಚಿಸಲಾಗುವುದು.

ಸಂ :

ಆ ಮಾರ್ಗದಲ್ಲಿ ಕಲಾವಿದ ಪರಿಣಿತನಾಗಬೇಕು. ಅಲ್ಲಿವರೆಗೆ ಆ ಮಾರ್ಗದ ಮಿತಿಗಳನ್ನು ಕುರಿತು ಆತ ಆಡುವ ಮಾತುಗಳು ಜೊಳ್ಳಾಗಿರುತ್ತವೆ. ನಮ್ಮ ಇಂದಿನ ಹಲವು ಗೊಂದಲಗಳಿಗೆ ಮೂಲ ಈ ವಿಚಾರವನ್ನು ತಿಳಿಯದೇ ಇರುವುದರಲ್ಲಿದೆ.

2 ಕಲಾವಿದನ ಕೃತಿಗಳಲ್ಲಿ 'ಅರ್ಥಪೂರ್ಣತೆ', 'ಬದ್ಧತೆ' ಎಂಬ ಮಾತುಗಳನ್ನು ಎಚ್ಚರಿಕೆಯಿಂದ ಬಳಸಬೇಕಾಗುತ್ತದೆ. ಕಲಾಕೃತಿಗಳನ್ನು ರಚಿಸುತ್ತಾ ಹೋಗುವ ಕಲಾವಿದನಲ್ಲಿ ಈ ಅಂಶ ಎಚ್ಚರದಿಂದಲೂ ಮೂಡಬಹುದು; ಅವನಿಗೆ ಅರಿವಿಲ್ಲದೆಯೂ ಮೂಡಬಹುದು. ಕಲಾವಿದನಿಗೆ ಗೊತ್ತಿಲ್ಲದೆ ಅವನ ಕಲಾಕೃತಿಗಳು ಅರ್ಥಪೂರ್ಣವಾಗಿರುವುದಕ್ಕೆ ಜಗತ್ತಿನ ಕಲೆಯ ಇತಿಹಾಸದಲ್ಲಿ ಹಲವು ನಿದರ್ಶನಗಳಿವೆ. ಆದರೆ ಹೀಗೆ ಒಬ್ಬ ಕಲಾವಿದನ ಕೃತಿಗಳ ಬದ್ಧತೆಯನ್ನು ಗುರುತಿಸುವ ಎಚ್ಚರದ ಮನಸ್ಸು ಕೂಡ ಇರಬೇಕಾಗುತ್ತದೆ. ಕಲಾವಿದ ಎಚ್ಚರವ ಸ್ಥಿತಿಯಲ್ಲೇ ತನ್ನ ಕಲಾಕೃತಿಯು ಅರ್ಥಪೂರ್ಣವಾಗಬೇಕೆಂದು ಯತ್ನಿಸಬಹುದು. ಇದು ಕೂಡ ಕೃತಿಯ ವಸ್ತುವಿನ ಆಯ್ಕೆ ಇಲ್ಲವೇ ಮತ್ತು ಅಭಿವ್ಯಕ್ತಿ ಕ್ರಮದಲ್ಲಿ ವ್ಯಕ್ತವಾಗುತ್ತದೆ. ಮೇಲುನೋಟಕ್ಕೆ ವಸ್ತುವಿನ ಅರ್ಥಪೂರ್ಣತೆಯನ್ನು ಗುರುತಿಸಿ ಹೇಳಬಹುದು. ಆದರೆ ಅಭಿವ್ಯಕ್ತಿಯ ಕ್ರಮದಲ್ಲಿ ಈ ಅರ್ಥಪೂರ್ಣತೆ ವ್ಯಕ್ತವಾಗುವ ಕ್ರಮವನ್ನು ಕಾಣಲು ವಿಶೇಷವಾದ ಮನಸ್ಸು ತರಬೇತಿಯಿಂದ ಸಿದ್ಧವಾಗಬೇಕು. ಅಲ್ಲದೆ ಕಲಾವಿದನೊಬ್ಬನ ಹಲವಾರು ಕೃತಿಗಳನ್ನು ಗಮನಿಸಿ ವಿವರಣೆ, ವಿಶ್ಲೇಷಣೆಗಳನ್ನು ನೀಡಬೇಕಾಗುತ್ತದೆ. ಇಲ್ಲದಿದ್ದರೆ ತೋರಿಕೆಯ ಮಾತುಗಳಿಗೆ ಜೋತುಬಿದ್ದ ವಿಮರ್ಶೆ ಮಾತ್ರ ಹುಟ್ಟುವುದು. ಅದರಿಂದ ಕಲಾವಿದನಿಗಾಗಲೀ ಕಲೆಯ ಇತಿಹಾಸಕ್ಕಾಗಲೀ ಯಾವ ಉಪಯೋಗವೂ ಆಗುವುದಿಲ್ಲ. ರಾಜಾರವಿವರ್ಮನ ಬಗ್ಗೆ ಇರುವ ಗೊಂದಲವನ್ನೆ ನೋಡೋಣ. ನಮ್ಮ ಮೊದಮೊದಲ ಕಲಾವಿಮರ್ಶಕರು ಅವನನ್ನೂ ಗೇಲಿ ಮಾಡಿದರು. ಬಂಗಾಳದ ಚಿತ್ರ ಕಲಾ ಪರಂಪರೆಯನ್ನು ಎದುರಿಟ್ಟುಕೊಂಡ ಹಲವರು (ಕರ್ನಾಟಕದಲ್ಲಿ ಅ.ನ.ಕೃ. ಕೂಡ ಒಬ್ಬರೂ) ರವಿವರ್ಮನನ್ನು ಒಬ್ಬ ಸಾಮಾನ್ಯ ದರ್ಜೆಯ ಕಲಾವಿದನೆಂದರು. ಅವನ ಚಿತ್ರದಲ್ಲಿ ಕಾಣುವ ಹೆಂಗಸರ ಬಗ್ಗೆ ಸಲ್ಲದ ಮಾತುಗಳನ್ನು ಆಡಿದರು. ಆದರೆ ಈ ದಿನ ಭಾರತೀಯ ಕಲೆಯ ಇತಿಹಾಸವನ್ನು ಪುನಾರಚಿಸತೊಡಗಿರುವ ಹಲವರಿಗೆ ರವಿವರ್ಮನ ಚಿತ್ರಗಳು ಅವನ ಕಾಲಕ್ಕೆ ಏನು ಮಹತ್ವಪೂರ್ಣ ಕಾಣಿಕೆ ನೀಡಿವೆ ಎಂಬುದನ್ನು ಗುರುತಿಸುವುದು ಸಾಧ್ಯವಾಗಿದೆ. ಧರ್ಮಕ್ಕೆ ಜೊತೆಯಾಗಿ ಬೆಳೆದ ಕಲೆಯ ಹಿನ್ನೆಲೆಯಲ್ಲಿ ಪಾಶ್ಚಾತ್ಯಕಲೆಯ ಅಭ್ಯಾಸಮಾಡಿದ ರವಿವರ್ಮ ಏನು ಮಾಡಬಹುದಿತ್ತೋ ಅದನ್ನು ಮಾಡಿದ್ದಾನೆ. ಇನ್ನೂ ಚಿತ್ರಕ್ಕಾಗಿ ಆಯ್ದ ಮಾದರಿಗಳ ಬಗ್ಗೆ ಮಾತನಾಡುವವರು ಆ ಪರಿಸರದ ಒಟ್ಟಾರೆ ಸಾಂಸ್ಕೃತಿಕ ಚಿತ್ರದಲ್ಲಿ ಕಲೆ ಮತ್ತು ಹೆಂಗ

ಸಿನ ಸಂಬಂಧವನ್ನು (ಮುಖ್ಯವಾಗಿ ನಾಟಕಗಳಲ್ಲಿ) ನೋಡಬೇಕು. ಆಗ ಬೇರೆಯಂದೆ ಆದ ದೃಷ್ಟಿಯಿಂದ ಅವನ ಚಿತ್ರಗಳನ್ನು ನೋಡುವುದು ಸಾಧ್ಯವಾಗಬಹುದು.

ಇದೇನೆ ಇರಲಿ. ಕಲಾವಿದನಿಗೆ ತನ್ನ ಬಗ್ಗೆ ನಂಬಿಕೆ ಇರುವುದು ಮುಖ್ಯ. ಯಾರನ್ನೇ ಮೆಚ್ಚಿಸಲಿಕ್ಕೆ ರಚಿಸಲು ತೊಡಗಿದವನು ಯಾರನ್ನೂ ಮೆಚ್ಚಿಸಲಾರ. ಹಕ್ಕಿಯ ಹಾಗೆ ಅವನ ಚೈತನ್ಯ ಸ್ವಾತಂತ್ರ್ಯವನ್ನು ಉಳಿಸಿಕೊಂಡಾಗ ಮಾತ್ರ ದೃಢತೆಯಿಂದ ಅವನ ಕಲಾಕೃತಿಗಳು ಉದ್ದೇಶಭರಿತವಾಗುವುದು ಕೇವಲ ಅನಿವಾರ್ಯವಾಗುತ್ತದೆ. ಕೆಲವೊಮ್ಮೆ ಕಲೆಯ ವಿಮರ್ಶೆ ಅವನನ್ನು ಕುಂಗೆಡಿಸಲೂಬಹುದು. ಆದರೆ ಆ ವಿಮರ್ಶೆ ಸರಿಯಾದ ಗ್ರಹಿಕೆಯಿಂದ ಮೂಡಿದಲ್ಲದೆ ಹೋದರೆ ಅವನು ಕುಂಗೆಡಬೇಕೇಕೆ ? ಅಲ್ಲದೆ ಅವನಲ್ಲಿನ ನಂಬಿಕೆಯ ಬೇರುಗಳು ಭದ್ರವಾಗಿದ್ದರೆ ಅವನ ಕಲಾಕೃತಿಗಳ 'ಸಾಮಾಜಿಕತೆ' ಗಟ್ಟಿಗೊಳ್ಳುವುದು ಸಹಜವೇ ಆಗುತ್ತದೆ.

3 ಒಂದು ಕಲಾಕೃತಿಯ ಹಿಂದೆ ಕೇವಲ ವೈಯುಕ್ತಿಕವಾದ ಒಂದು ಮನಸ್ಸು ಮಾತ್ರ ಇರುತ್ತದೆ ಎಂದು ತಿಳಿಯಬಾರದು. ಅದರ ಜತೆಗೆ 'ಪರಿಸರ'ವೂ ಜತೆಗೂಡುತ್ತದೆ. ವೈಯಕ್ತಿಕವಾದ ಮನಸ್ಸಿನ ಪ್ರಭಾವಗಳನ್ನು ನಾವು ಕಲಾಕೃತಿಗಳಲ್ಲಿ ಕಾಣುತ್ತೇವೆ. ಆದರೆ ಕಲಾಕೃತಿಗಳು ಕೇವಲ ರಚನಾಕಾರನ ಮನಸ್ಸಿನ ಅಧ್ಯಯನಕ್ಕೆ ವಸ್ತುಗಳಲ್ಲ. ಬದಲಿಗೆ ಕಲಾಕಾರನಿಂದ ಪ್ರತಿನಿಧಿತವಾಗುವ ಮಾನವನ ಮನಸ್ಸು ತಳೆಯುವ ಆಕಾರ ಗಳನ್ನು ಕಲಾಕೃತಿಗಳು ತೋರಿಸುತ್ತವೆ. ಅಲ್ಲದೆ ಅದರ ಜೊತೆಗೂಡುವ 'ಪರಿಸರ'ದ ಪ್ರಭಾವವೂ ಗಮನಾರ್ಹ. ಇದು ಕೇವಲ ಕಲಾಕೃತಿಯ ವಸ್ತುವಿಗೆ ಪ್ರೇರಕವಾಗು ವುದು ಮಾತ್ರವಲ್ಲದೆ ಅದರ ಅಭಿವ್ಯಕ್ತಿಯ ಕ್ರಮವನ್ನು ರೂಪಿಸುತ್ತಿರುತ್ತದೆ; ಕಲಾವಿದ ನಿಗೆ ಹೊಸ ಸವಾಲುಗಳನ್ನು ಕೂಡ 'ಪರಿಸರ'ವು ತಂದೊಡ್ಡುತ್ತಿರಬಹುದು. ಮಾಧ್ಯಮ ವನ್ನೇ ಕುರಿತು ಒಂದು ಸರಳ ಚಿಂತನೆಯನ್ನು ಮಾಡಬಹುದು. ಚಿತ್ರಕಾರನೊಬ್ಬ ಕೇವಲ ಕೆಲವು ವರ್ಣಗಳನ್ನು ಇಟ್ಟುಕೊಂಡು ಇಂದಿನ ದಿನಗಳಲ್ಲಿ ಕೆಲಸ ಮಾಡಲಾರ. ವರ್ಣಗಳ ಛಾಯೆಯ ಸೂಕ್ಷ್ಮವ್ಯತ್ಯಾಸಗಳನ್ನು ಕೂಡ ಪರಿಮೂಡಿಸುವ ತಾಂತ್ರಿಕ ಸಾಧನೆಗಳು ನಡೆದುಹೋಗಿವೆ; ತಕ್ಕ ಸಾಮಗ್ರಿಗಳು ಮಾರುಕಟ್ಟೆಗೆ ಬರುತ್ತವೆ. ಹೀಗಿರುವಾಗ ಚಿತ್ರಕಾರನೊಬ್ಬ ತನ್ನ ಅಭಿವ್ಯಕ್ತಿಯ ಕೌಶಲ್ಯವನ್ನು ಹೆಚ್ಚು 'ಸಂಕೀರ್ಣ' ಗೊಳಿಸಿಕೊಳ್ಳಬೇಕಾಗುತ್ತದೆ. ಇಂಥದೇ ಇನ್ನು ಹಲವು ಉದಾಹರಣೆಗಳನ್ನು ಕೊಡುತ್ತಾ ಹೋಗಬಹುದು. ಒಟ್ಟಾರೆ ಕಲಾವಿದನ ಕೃತಿಗಳ ಹಿಂದಿರುವ 'ಪರಿಸರ'ದ ಪ್ರೇರಣೆ ಬಹುಮುಖಿಯೂ, ಗಾಢವೂ ಆದುದಾಗಿರುತ್ತದೆ. ಕಲಾವಿದ ಈ ಬಗ್ಗೆ ಎಚ್ಚರವಾದಷ್ಟು ಅವನ ಕೃತಿಗಳ ಮಹತ್ವ ಹೆಚ್ಚಾಗುತ್ತದೆ. ಆಗ ಮಾತ್ರ ತನ್ನ ಕ್ಷೇತ್ರ

ದಲ್ಲಿ ಇರುವ ಹೊಸ ಸವಾಲುಗಳನ್ನು, ಅನ್ಯ ಕಲಾಕ್ಷೇತ್ರಗಳು ತನ್ನ ಕ್ಷೇತ್ರಕ್ಕೆ ಹಾಕುವ ಸವಾಲುಗಳನ್ನು ಎದುರಿಸಲು ಸಿದ್ಧನಾಗುತ್ತಾನೆ.

4 ಕಲಾವಿದನಿಗೆ ಕಲೆಯ ಪರಂಪರೆಯ 'ಅರಿವು' ಇರಬೇಕು. ಈ 'ಅರಿವು' ವಿಚಿತ್ರವಾದುದು. ಕೆಲವೊಮ್ಮೆ ಹಿಂದಿನ ಶ್ರೇಷ್ಠ ಕಲಾಕೃತಿಗಳ ಛಾಯಾನುಕರಣೆಯಲ್ಲೇ ಕಲೆಯ ಅಭ್ಯಾಸವನ್ನು ನಡೆಸುವುದೂ ಉಂಟು. ಇದಿಷ್ಟೇ ಸಾಲದು. ಪರಂಪರೆಯ ಬಗ್ಗೆ ಕಲಾವಿದನಿಗೆ 'ತುಡಿತ' ವಿರಬೇಕು. ಅದರ ಮುಂದುವರಿಕೆ ತಾನೆಂಬ ಭಾವ ಸದಾ ಜಾಗೃತವಾಗಿರಬೇಕು. ಇಲ್ಲಿ ಭಾರತೀಯ(ವಿಸ್ತರಿಸಿ ಹೇಳುವುದಾದರೆ ಪೌರಸ್ತ್ಯ) ಮನಸ್ಸಿಗೆ ಒಂದು ತೊಡಕಿದೆ. ನಮಗೆ ನಮ್ಮದೇ ಆದ ಕಲಾ ಪರಂಪರೆ ಇದೆ. ಆದರೆ ಇಂದು ಕಲೆಯ ವಿಮರ್ಶೆಯಾಗಲೀ, ಕಲೆಯ ಶಿಕ್ಷಣವಾಗಲೀ ಭಾರತೀಯವಾಗಿಲ್ಲ ಪಾಶ್ಚಾತ್ಯವಾದುದಾಗಿದೆ. ಹೀಗಿರುವಾಗ ಪರಂಪರೆಯ ಮುಂದುವರಿಕೆ ಎಂಬ ಮಾತಿಗೆ ಅರ್ಥವಿದೆಯೇ? ಜಪಾನ್‌ದೇಶ ಅದಕ್ಕೆ ತನ್ನದೇ ಆದ ಉತ್ತರವನ್ನು ಕಂಡು ಕೊಂಡಿದೆ. ಅಲ್ಲಿ ಪಾರಂಪರಿಕ ಶೈಲಿಯ ಮುಂದುವರಿಕೆ ಒಂದು ಕಡೆಯಾದರೆ, ಆಧುನಿಕವಾದ, ಪಾಶ್ಚಾತ್ಯ ಪ್ರಭಾವಿತ ಶೈಲಿಯ ಇನ್ನೊಂದು ಕಡೆ ಬೆಳೆಯುತ್ತಿದೆ. ಆದರೆ ನಮ್ಮಲ್ಲಿ ನಿಜವಾದ ಪರಂಪರೆಯ ತಿಳಿವು ಮೂಡದೇ ಹೋಗಿದೆ ಮಾತ್ರವಲ್ಲ; ಕಲಾವಿದ ಮನಸ್ಸಿನ ಭಾವುಕ ಪ್ರೇರಣೆಗಳು ಧಾರ್ಮಿಕ ನೆಲೆಯಿಂದ ಹುಟ್ಟುತ್ತಿದ್ದ ಹಿಂದಿನ ಸ್ಥಿತಿಯಿಂದ ಹೊರಬಿದ್ದಿದ್ದೇವೆ. ಹೀಗಾಗಿ ಆಧುನಿಕ ಭಾರತದ ಕಲಾವಿದ ಅತ್ಯಂತ ತೀವ್ರವಾದ 'ಗೊಂದಲ'ದಲ್ಲಿದ್ದಾನೆ. ಈ 'ಗೊಂದಲ'ದ ಹತ್ತಿರಕ್ಕೆ ಬರದವರು, ಮೇಲುಮೇಲಿನ ಆಯ್ಕೆಗಳಲ್ಲಿ ತೃಪ್ತರಾದವರು ಮಾತ್ರ ನಿರಾಳವಾದ ಬಗೆಯಲ್ಲಿ ಶೈಲಿಗಳನ್ನು ರೂಪಿಸಿಕೊಳ್ಳುತ್ತಿದ್ದಾರೆ. ಶೈಲಿ ಖಚಿತವಾಗಿರುವ ಕಾರಣ ಅವರೇ ಹೆಚ್ಚು ಜನಪ್ರಿಯತೆಯನ್ನು ಗಳಿಸಿಕೊಳ್ಳುತ್ತಿದ್ದಾರೆಂಬುದೂ ನಿಜ. ಆದರೆ ನಮ್ಮ ಕಲೆಯ ಬಗ್ಗೆ ಗಾಢವಾಗಿ ಚಿಂತಿಸುವ ಯಾರಿಗಾದರೂ ಕಲೆಯ ಪರಂಪರೆಯೊಡನೆ ಆಧುನಿಕ ಮನಸ್ಸು ಹೊಂದಿರುವ ತಾಕಲಾಟ ಹಾಗೂ ಆ ಮೂಲಕವಾದ 'ಗೊಂದಲ'ದ ಪರಿಚಯವಾಗದೇ ಹೋಗದು. ಇದರಿಂದಾಗಿಯೇ ಆಧುನಿಕರಾದ ಹಲವು ಕಲಾವಿದರ ಕೃತಿಗಳಲ್ಲಿ 'ಗೊಂದಲ'ವೇ ಒಂದು ಶೈಲಿಯಾಗುತ್ತಿರುವುದನ್ನು ಕೂಡ ನಾವು ಕಾಣಬಹುದಾಗಿದೆ.

5 ಕಲೆಯನ್ನು ಕುರಿತಂತೆ ನಮ್ಮ ಶಿಕ್ಷಣಪದ್ಧತಿ ನಿರ್ಲಕ್ಷ್ಯವನ್ನು ತೋರಿಸುತ್ತಲೇ ಬಂದಿದೆ. ಸಾಮಾನ್ಯ ಶಿಕ್ಷಣದಲ್ಲಿ ಕಲಾವಿದರನ್ನು ತಯಾರಿಸಲು ಬರುವುದಿಲ್ಲ ಎನ್ನುವುದು ನಿಜ. ಹಾಗೆಂದ ಮಾತ್ರಕ್ಕೆ ಕಲೆಯ ಬಗ್ಗೆ ಮನಸ್ಸು ಸ್ಪಂದಿಸುವ ಹಾಗೆ ಮಾಡ

ಲಾಗುವುದಿಲ್ಲವೇ? ನಮ್ಮ ಕಣ್ಣು, ಕಿವಿ, ಕೈಗಳು ಈಗ ಸರಿಯಾಗಿ ಕೆಲಸ ಮಾಡುತ್ತಿಲ್ಲ. ಕಂಡದ್ದರಲ್ಲಿ ಹಿತವಾದುದನ್ನು, ಆಕಾರವುಳ್ಳದ್ದನ್ನು ಗ್ರಹಿಸಲು ಬರುತ್ತಿಲ್ಲ. ಕಿವಿಗಳಂತೂ ಸದ್ದು ಹಾಗೂ ನಾದಗಳ ನಡುವೆ ವ್ಯತ್ಯಾಸವನ್ನು ಗುರುತಿಸಲಾಗದಂತೆ ಜಡಗಟ್ಟಿ ಹೋಗಿದೆ. ಕಲಾಶಾಲೆಗಳಾದರೂ ಕಲಾವಿದರನ್ನೆ ಸೃಷ್ಟಿಸಬೇಕೆಂದು ಹೇಳಲಾಗದು. ಕೊನೆಯ ಪಕ್ಷ ಇತರರಿಗಿಂತ ಸೂಕ್ಷ್ಮವಾದ ಬಗೆಯಲ್ಲಿ ಕಣ್ಣು. ಕಿವಿ, ಕೈಗಳನ್ನು ಬಳಸಬಲ್ಲ ವರನ್ನಾದರೂ ಈ ಶಾಲೆಗಳು ರೂಪಿಸಬೇಕಾಗಿದೆ. [ಕಲಾಶಾಲೆಗಳನ್ನು ನಡೆಸಲು ಇರುವ ಆರ್ಥಿಕ, ಆಡಳಿತಾತ್ಮಕ ಅಡಚಣೆಗಳನ್ನು, ಇಂಥ ಶಾಲೆಗಳನ್ನು ನಡೆಸ ಹೊರಟ ಕಲಾವಿದನ ವೈಯುಕ್ತಿಕ ಕಲಾವಿಕಾಸಕ್ಕೆ ಇರುವ ಅಡ್ಡಿಗಳನ್ನು. ಕಲಾಶಾಲೆಗಳನ್ನು ಕುರಿತಂತೆ ಸಾಮಾಜಿಕವಾಗಿ ಇರುವ ಸಾಂಪ್ರದಾಯಿಕ ವಿಚಾರಗಳು ತರುವ ತೊಡಕು ಗಳನ್ನು ಶ್ರೀ ಹಡಪದ್ ಸಾಕಷ್ಟು ವಿವರಿಸಿದರು] ಇದು ಸುಲಭವಾದ ಕೆಲಸವಲ್ಲ. ಆದರೆ ಇಷ್ಟನ್ನಾದರೂ ಮಾಡುವುದರಿಂದ ಮುಂಬರುವ ಜನಾಂಗ ತುಂಬುಮನಸ್ಸಿನವ ರಾಗುವ ಸಂಭವವೇ ಹೆಚ್ಚಾಗಿರುತ್ತದೆ. ○

## ಬೀದಿಮಾತು

## ನಮ್ಮೂರಿನ ರಾಜಿಗ ರಾಜೀವನಾದ

ನಮ್ಮೂರಿನ ಜನಸಂಖ್ಯೆಯನ್ನು ಕೇಳಬೇಡಿ. ಇದೊಂದು ಹಳ್ಳಿಯಾಗಿರಬಹುದು ಡಿಳ್ಳಿಯಾರಬಹುದು. ಇಲ್ಲಿಗೆ ಧೂಳು ತುಂಬಿದ ವಾಹನಗಳು ಬರುತ್ತವೆ. ನಗರದಲ್ಲಿ ವಿಮಾನಗಳು ಹಾರಿಹೋಗುತ್ತವೆ. ಇವೆಲ್ಲವು ಇಲ್ಲಿಯ ಜನರಿಗೆ ಈಗಲೂ ಕುತೂಹಲ ನಾನಾ ರೀತಿಯ ರಾಜಕೀಯ ನಡೆಯುತ್ತೆ. ಇಲ್ಲಿ ಒಳ್ಳೆಯವರಿದ್ದಾರೆ–ವಂಚಕರಿದ್ದಾರೆ. ಯಾವಾಗಲೂ ಆಡಳಿತ ಪಕ್ಷದತ್ತ ಬಾವುಟ ಹಾರಿಸುವ ಪುಡಾರಿಗಳಿದ್ದಾರೆ. ಕತ್ತೆಯನ್ನು ಕುದುರೆ ಎಂದು ಕರೆದು ಖುಷಿಪಡುವವರಿದ್ದಾರೆ. ಇವರೆಲ್ಲರ ನಡುವೆ ನರಳುವ ಜನ ನಗಲು ಪ್ರಯತ್ನಿಸುತ್ತಾರೆ. ಇಷ್ಟೊಂದು ದೊಡ್ಡ ಹಳ್ಳಿಯಲ್ಲಿ ಒಂದೈದು ಕುಟುಂಬಗಳು ಕಿತಾಪತಿ ಮಾಡುತ್ತ ಅಧಿಕಾರ ಚಲಾಯಿಸ್ತಾರೆ. ಅಧಿಕಾರ ಅನ್ನೋದು ಇವರಿಗೆ

ಆಜನ್ಮಸಿದ್ಧಿ ಹಕ್ಕು ಎಂದು ರಾಜರೋಷವಾಗಿ ತಿರಗಾಡ್ತಾರೆ. ಆದ್ದರಿಂದಲೇ ಇವನ ಮನೆಯಲ್ಲಿ ಹೆಂಡತಿ ಮಕ್ಕಳು ಪಂಚಾಯ್ತಿ ಸದಸ್ಯರಾಗಿರುತ್ತಾರೆ.

ಒಂದು ದಿನ ಒಬ್ಬ ಬಂದ. ನಮ್ಮೂರಿನ ಗೌಡಸಾನಿ ಮನೆಯಲ್ಲಿ ಉಳಕೊಂಡ ಅವನು ಸಾಕಷ್ಟು ಚೆನ್ನಾಗಿದ್ದ. ದೃಢಕಾಯನಾಗಿದ್ದ. ಮೊದಮೊದಲು ಅವನನ್ನು ರಾಜಿಗ ಎಂದು ಕರೆಯುತ್ತಿದ್ದರು. ಗೌಡಸಾನಿಗೆ ಗಂಡ ಇರಲಿಲ್ಲ. ಪುಟ್ಟ ಮಕ್ಕಳಿದ್ದರು. ಆದ್ದರಿಂದ ಮುಂದೆ ನಿಂತು ಮನೆಯ ಕೆಲಸ ಕಾರ್ಯಗಳನ್ನು ಮಾಡತೊಡಗಿದ. ಗೌಡಸಾನಿಯ ಮನೆ ಬೆಳೆಯಿತು. ಎಲ್ಲರೂ ರಾಜಿಗನತ್ತ ನೋಡತೊಡಗಿದರು. ಒಂದು ದಿನ ಗೌಡಸಾನಿ ಮನೆಯಲ್ಲಿ ಸಭೆ ಸೇರಿತ್ತು. ಊರಿನ ಮತ್ತೊಬ್ಬ ಪುಟ್ಟಗೌಡ 'ರಾಜಿಗ' ಎಲ್ಲಿ ಎಂದು ಕರೆದ. ಗೌಡಸಾನಿ ಕಣ್ಣುರಿ ಮಾಡಿಕೊಂಡು ನೋಡಿದಳು. ಪುಟ್ಟಗೌಡ ಗಾಭರಿಯಾದ. ಮಿಕ್ಕವರೆಲ್ಲ ಅರ್ಥಮಾಡಿಕೊಂಡರು. ಸಭೆ ಮುಗಿದ ಮೇಲೆ ಎಲ್ಲರೂ "ರಾಜೀವ ಅವರೇ ಚೆನ್ನಾಗಿದ್ದೀರಾ ?" ಎಂದು ಕೇಳತೊಡಗಿದರು.

ಇದಾದ ನಂತರ ಹೊರಗಡೆಯೂ ಯಾರೂ ರಾಜಿಗ ಎಂದು ಕರೆಯುವುದಿಲ್ಲ. ಊರಿನ ಯುವಕರೆಲ್ಲ ರಾಜೀವನಿಗೆ ನಮಸ್ಕಾರ ಮಾಡ್ತಾರೆ. ದಿನಕ್ಕೊಂದು ಬಾರಿ ಮಾತಾಡಿಸಿಕೊಂಡು ಹೋಗ್ತಾರೆ. ಇದರಿಂದ ರಾಜೀವನಿಗೆ ಧಿಮಾಕು ಬಂದಿದೆ. ಠೀವಿಯಿಂದ ಊರಿನಲ್ಲಿ ಅಲೆದಾಡುತ್ತಾನೆ. ಜನರ ಹತ್ತಿರ ಏನೇನೋ ಮಾತಾಡ್ತಾನೆ ಅವರು ಕೇಳ್ತಾರೆ. ಆ ಊರಿನ ಕುಲಗೋತ್ರ ಗೊತ್ತಿರುವ ಹಾಗೆ ಸಲಹೆ ಕೊಡ್ತಾನೆ. ಜನ ಬಾಯ್ಬಿಟ್ಟು ಆಲಿಸ್ತಾರೆ. ಗೌಡಸಾನಿಗೂ ಈಗ ಒಂದು ರೀತಿಯ ಪೊಗರು. ತನ್ನ ಮನೆತನದ ಗತ್ತು ಯಾವುದೋ ಒಂದು ರೂಪದಲ್ಲಿ ಮುಂದುವರೆದುಕೊಂಡು ಹೋಗುತ್ತಿದೆಯಲ್ಲ ಎಂದು. ಪಂಚಾಯಿತಿ ಚುನಾವಣೆ ಬಂತು. ರಾಜೀವ ಗೆದ್ದ ಪಂಚಾಯಿತಿ ಅಧ್ಯಕ್ಷನಾದ. ತಾಲ್ಲೂಕಿನವರಿಗೆಲ್ಲ ಗೊತ್ತಾದ. ಗೌಡಸಾನಿಯ ಮನೆಯು ಜಾತ್ರೆಯಾಯಿತು.

ಎಲ್ಲರೂ ರಾಜೀವನನ್ನು ಎಂ.ಎಲ್.ಎ. ಆಗೂ ಎಂ.ಪಿ. ಆಗೂ ಅನ್ನಿದ್ದಾರೆ. ಅದಕ್ಕೆಲ್ಲ ರಾಜೀವ ಠೀವಿಯಿಂದ ನಗುತ್ತಿದ್ದವನು ಎಂ.ಪಿ.ನೂ ಆಗಿಬಿಟ್ಟ. ಇದನ್ನೆಲ್ಲ ನೋಡಿದಾಗ ಇವನ ಪೊಗರು ಎಲ್ಲಿಂದ ಬಂತು ಅಂದುಕೊಂಡಿದ್ದೇನೆ. ಅದೇ ಊರಿನ ಮಗನಾದ ನಾನು ರಾಜಿಗನಿಗಿಂತ ಬುದ್ಧಿವಂತನಾಗಿದ್ದರೂ ಯಾರೂ ಎಂ.ಪಿ. ಆಗು ಮುಂದೆ ಪ್ರಧಾನಿಯಾಗುವೆ ಅನ್ನುವುದಿಲ್ಲ. ಆದ್ದರಿಂದ ನಾನು ಗೌಡಸಾನಿಯನ್ನು ಹುಡುಕಲು ತೀರ್ಮಾನಿಸಿದ್ದೇನೆ. ದಯವಿಟ್ಟು ನಿಮಗ್ಯಾರಿಗಾದರೂ ಗೊತ್ತಿದ್ದರೆ ತಿಳಿಸಿ. ಆ ಗೌಡಸಾನಿಯ ಮೂಲಕ ನಾನು ನಾಲ್ಕು ದಿವಸ ಪ್ರಧಾನಿಯಾಗಬೇಕಾಗಿದೆ.

## ಎರಡು : ಮಹಾನ್ ಗಾಯಕನಿಗೆ ಮಹಾನ್ ಪ್ರೇಕ್ಷಕ



ಹೊಸ ಸ್ವಪ್ನ ಬಿದ್ದಂತೆ
ಅಂತೆ, ಇಂತೆ, ಎನ್ನುತ್ತ
ಮನ ಮೀರಿ ನಾ ನಿಂತೆ
ಕಳಚಿ ಬಿದ್ದಿತ್ತು ಗೆಳೆಯ
ಜಗೆದ ಸಂತೆಯ ಚಿಂತೆ"

—ಬೇಂದ್ರೆ

ಸಂಗೀತದ ಬಗ್ಗೆ ನಾವು ಮಾತಾಡಿದಷ್ಟು ಶುಷ್ಕವಾಗಿ ಕಾಣಬಹುದು. ಆದರೆ ಕೇಳುವ ಮನಸ್ಸು ಯಾವಾಗಲೂ ಶುಷ್ಕವಾಗುವುದಿಲ್ಲ. ದೇಶ-ಭಾಷೆಯನ್ನು ಮೀರಿ ನಿಲ್ಲುವ ಈ ಸಂಗೀತಕ್ಕೆ ಮನುಷ್ಯ ಸಂಬಂಧಗಳೇ ಗಡಿ ಅನ್ನಿಸುತ್ತೆ. ಆದ್ದರಿಂದಲೇ ಇದಕ್ಕಿರುವ ಅವ್ಯಕ್ತ ಶಕ್ತಿ ನಮ್ಮನ್ನು ಹುಚ್ಚರನ್ನಾಗಿಸುವುದು ಅಥವಾ ಭಾವುಕರನ್ನಾಗಿಸುವುದು. ಈ ದೃಷ್ಟಿಯಿಂದ ಮೇಲಿನ ಮನ್ಸೂರರ ಬಗ್ಗೆ ಬೇಂದ್ರೆಯವರ ಸಾಲುಗಳು ನನಗೆಹೆಚ್ಚು ಅರ್ಥಗರ್ಭಿತವಾಗಿ ಕಾಣುತ್ತದೆ.

ಜುಲೈ ಏಳರಂದು ಸಂಜೆ ಮಲ್ಲಿಕಾರ್ಜುನ ಮನ್ಸೂರರಿಗೆ ಅಭಿನಂದನಾ ಸಮಾರಂಭವಿತ್ತು. ನಾವು ಮುಂಚಿತವಾಗಿಯೇ ಜಾಗ ಹಿಡಿದಿದ್ದೆವು. ಸಮಾರಂಭ ಶುರುವಾಗುವ ಸಮಯ ಬಂದರೂ ಕಲಾಕ್ಷೇತ್ರ ತುಂಬಿರಲಿಲ್ಲ. ಗೆಳೆಯ ಡಿ.ಆರ್. ನಾಗರಾಜ್ "ಮನ್ಸೂರರ ಸಂಗೀತಕ್ಕೆಯೇ ಜನ ಬರುವುದಿಲ್ಲ" ಎಂದು ಗೊಣಗಾಡಿದ. ಕೊನೆಗೆ ಸಂಗೀತದ ಅಭಿಮಾನಿಗಳು ತುಂಬಿದರು. ಮನ್ಸೂರರು ಬಂದರು. ಅಭಿಮಾನಿಗಳು ಪುಷ್ಪಹಾರಗಳನ್ನು ಅರ್ಪಿಸಿದರು. ಮನ್ಸೂರರನ್ನು ಕುರಿತು 'ಸುಧಾ' ಪತ್ರಿಕೆಯ ಮಾಜಿ ಸಂಪಾದಕರು ಸ್ವಾರಸ್ಯಕರವಾಗಿ ಮಾತಾಡಿದರು. ಮನ್ಸೂರರು ಹಾಡಲು ತೊಡಗಿದರು. ಒಂದರ್ಧ ಗಂಟೆಯಾದ ಮೇಲೆ ಇಬ್ಬರು ಶ್ವೇತಧಾರಿ ಹೆಂಗಸರು ವೇದಿಕೆಯ ತನಕ ಹೋಗಿ ವಾಪಸ್ಸು ಬಂದರು.

ಮನ್ಸೂರರು ತಮ್ಮ ಹಾಡಿನ ಏಕಾಗ್ರತೆಯಲ್ಲಿ ತಮ್ಮನ್ನು ಮರೆತಿದ್ದರು. ಆ ಶ್ವೇತಧಾರಿ ಇಬ್ಬರು ಹೆಂಗಸರು ವೇದಿಕೆಯ ಮೇಲೆ ಒಬ್ಬ ಸೊಣಕಲು ವ್ಯಕ್ತಿಯನ್ನು

ಕರೆದುಕೊಂಡು ಹೋದರು. ಆ ಮನುಷ್ಯ ಕಾಳಿಂಗರಾವ್. ಎಷ್ಟೊಂದು ಸೊರಗಿ ಹೋಗಿದ್ದಾರೆ ಅಂದುಕೊಂಡೆ. ಮನ್ಸೂರರು ಸಂಗೀತದ ಭಾವಸಮಾಧಿಯಿಂದ ಎಚ್ಚರ ಗೊಂಡರು. ಕಾಳಿಂಗರಾವ್ ಹೂಮಾಲೆಯೊಡನೆ ನಿಂತಿದ್ದರು. ಮಹಾನ್ ಗಾಯಕ ಮಹಾನ್ ಪ್ರೇಕ್ಷಕನನ್ನು ಆಲಂಗಿಸಿ ನಲಿದಾಡಿದರು.

ಕಾಳಿಂಗರಾವ್‌ರವರನ್ನು 1966ರನ್ನ ಇದೇ ವೇದಿಕೆಯ ಮೇಲೆ ಮೊದಲಬಾರಿಗೆ ಕಂಡಿದ್ದೆ. ಕುವೆಂಪು ನಾಟಕೋತ್ಸವವಿತ್ತು. ಹಳ್ಳಿಯಿಂದ ಬಂದಿದ್ದೆ. ನಾಟಕಕ್ಕೆ ಮುನ್ನ ಕಾಳಿಂಗರಾವ್‌ರವರು ಹಾಡಬೇಕಾಗಿತ್ತು. ತುಂಬ ಕುಡಿದಿದ್ದರು. ಹಾಡಲು ತೊಡಗಿದರು. ಮಲಗಿ ಹಾಡತೊಡಗಿದರು. ಯಾರೋ ಬಂದು ಹೊರಗೆ ಕರೆಯಲು ಪ್ರಯತ್ನಿಸಿದರು. ಆದರೆ ಆಸಾಮಿ ಜಗ್ಗಲಿಲ್ಲ. ಆ ಅಮಲಿನಲ್ಲೂ ನನ್ನನ್ನು ರೋಮಾಂಚನಗೊಳಿಸಿದ ಈತನ ಬಗ್ಗೆ ಎಲ್ಲಿಲ್ಲದ ಗೌರವ. 1973ರನಂತರ ಸಮಾಜವಾದಿ ಪಕ್ಷಕ್ಕೆ ದಿನಾ ಬರುತ್ತಿದ್ದರು. ಎಷ್ಟೋ ಸಮಯ ಸುಮ್ಮನೆ ಕೂರುತ್ತಿದ್ದರು. ಕ್ರಾಂತಿಯ ದಿನಗಳನ್ನ ನಾವು ಹಚ್ಚ ಹಸುರಾಗಿ ಕಾಣುತ್ತಿದ್ದ ದಿನಗಳವು. ಈ ಮಹಾನ್ ಗಾಯಕನಿಗೂ ರಾಜಕೀಯ ಬದ್ಧತೆ ಇದೆಯಲ್ಲವಾ ? ಅಂದು ಕೊಂಡೆ. ಅದನ್ನು ಎಂದೂ ಚರ್ಚಿಸಲಾಗಲಿಲ್ಲ. ತುಂಬ ಮೂಡಿ ಮನುಷ್ಯ. ಈತ ಬಂದಾಗಲೆಲ್ಲ ಮೋಹನ್‌ಕುಮಾರಿ ಮತ್ತು ಸೋಹನ್‌ಕುಮಾರಿ ಬಂದದ್ದನ್ನು ಕಂಡಿದ್ದೇನೆ. ಒಂದು ಕಾಲದಲ್ಲಿ ಅವರ ಹಾಡನ್ನು ಕೇಳಿ ಖುಷಿ ಪಟ್ಟಿದ್ದೆ.

ಇಂದು ಹಾಡುವ ದಿನಗಳಿಂದ ಅವರು ದೂರ ಉಳಿದಿದ್ದಾರೆ. ಕಾಳಿಂಗರಾವ್ ರೀತಿಯಲ್ಲಿ ಜನರನ್ನು ಹುಚ್ಚೆಬ್ಬಿಸುವುದನ್ನು ಕಳೆದುಕೊಂಡಿದ್ದಾರೆ. ಆದರೆ ದಿನಾ ಈ ಮಹಾನ್ ಗಾಯಕನನ್ನು ಕಾಯುವುದು ಎಷ್ಟೊಂದು ದೊಡ್ಡ ಕೆಲಸ ಅನ್ನಿಸುತ್ತೆ. ಮೋಹನ್‌ಕುಮಾರಿ ಮತ್ತೆ ಸೋಹನ್‌ಕುಮಾರಿಯವರಿಗೆ ಕಾಳಿಂಗರಾವ್ ತುಂಟ ಮಗು ವಿದ್ದಂತೆ, ಆದ್ದರಿಂದಲೇ ಕಾಳಿಂಗರಾವ್‌ರವರ ತುಂಟಾಟಗಳನ್ನು ಪ್ರೀತಿಯಿಂದ ಸಹಿ ಸುತ್ತ ಬಂದಿದ್ದಾರೆ.

ನಾಲ್ಕೈದು ವರ್ಷಗಳ ಹಿಂದಿನ ಮಾತು. ಮಡಕೇರಿಗೆ ಹೊರಟಿದ್ದೆ. ನಾನ್ನು ಕೂತಿದ್ದ ಬಸ್ಸಿಗೆ ಮೂವರೂ ಬಂದರು. ನನ್ನ ಮುಂದೆಯೇ ಕೂತರು. ಕಾಳಿಂಗರಾವ್ ತುಂಬ ಕುಡಿದಿದ್ದರು. ಮತ್ತೆ ಮತ್ತೆ ಕುಡಿಯಲು ಒತ್ತಾಯಿಸುತ್ತಿದ್ದರು. ಅವರ ಮುಂದೆ ಈ ಮಗುವಿನ ಆಟ ನಡೆಯಲಿಲ್ಲ. ನಾನೂ ಮಾತಾಡುವುದು ಕಷ್ಟವಾಯಿತು. ಮಾರನೆಯ ದಿನ ಸಂಜೆ ಮಡಕೇರಿಯ ಪುರಭವನದ ಕಾರ್ಯಕ್ರಮಕ್ಕೆ ಆಹ್ವಾನಿಸಿದರು. ಹೋದೆ. ಕಾಳಿಂಗರಾವ್ ಹುಚ್ಚನಂತೆ ವರ್ತಿಸುತ್ತಿದ್ದರು. ಮೊದಲಿನ ಧ್ವನಿಯಲ್ಲಿಯ

ಮಾಧುರ್ಯ ಕರಗಿ ಹೋಗಿತ್ತು. ಶಿಸ್ತಿಲ್ಲದ ಈ ಮನುಷ್ಯ ಹೀಗೆಯೇ ಕರಗಿ ಹೋಗ ಬಹುದು ಅಂದುಕೊಂಡೆ. ಆದರೆ ಆತನನ್ನು ರಕ್ಷಿಸುವಲ್ಲಿ ಆ ಹೆಂಗಸರ ತ್ಯಾಗವನ್ನು ನಾನೆಂದುಮರೆಯಲಾರೆ.

ಮನ್ಸೂರರು ಹಾಡುತ್ತಿದ್ದರೆ ಕಾಳಿಂಗರಾವ್ ಹಾಡುತ್ತಿದ್ದಂತೆ ಭಾಸವಾಗ್ತಿತ್ತು. ಯಾಕೆಂದರೆ ವೇದಿಕೆಯ ಒಂದು ಮೂಲೆಯಲ್ಲಿ ಕೂತು ಹಾಡುವಗತ್ತಿನಲ್ಲಿ ಕೈ ಚಲನೆಗೆ ಜೀವ ಕೊಟ್ಟಿದ್ದರು. ಇದೊಂದು ಅಪರೂಪದ ಸಮಾಗಮವಾಗಿತ್ತು.

ಇಂದು ಈ ಗಾಯಕನ ಧ್ವನಿಯನ್ನು ನಾನು ರೇಡಿಯೋದಲ್ಲಿ ಅಥವಾ ಗೆಳೆಯರ ಮನೆಯಲ್ಲಿ ರೆಕಾರ್ಡ್ ಪ್ಲೇಯರ್‌ನಲ್ಲಿ ಕೇಳುವಾಗ ಪುಳಕಿತನಾಗುತ್ತೇನೆ. ಅದೇ ರೀತಿ ಯಲ್ಲಿ ಹಾಡಲಾರದ ಈ ಗಾಯಕ ತನ್ನ ಧ್ವನಿಯನ್ನು ಕೇಳಿ ಎಷ್ಟೊಂದು ನೋವಿಂದ ನರಳುತ್ತಿರಬಹುದು ಹಳೆಯ ನೆನಪುಗಳಿಂದ ಪಾರಾಗದೆ ಅನ್ನಿಸಿತು. ●

---

ಓದಿ :

'ಪಂಚಮ' ಮೊಸಲಾತಿ ವಿಶೇಷಾಂಕ

ಅಂಕಣ

ರುಜುವಾತು

ಸಾಕ್ಷಿ

ಸಂಕ್ರಮಣ

ಚಲನ

---

# ಒಳನೋಟ

## ಹೊಸಬಾಳೆ ಆರ್‌ಎಸ್‌ಎಸ್ ರೀತಿಯಲ್ಲಿ ಮಾತಾಡಿದ್ದಾರೆ.

ಮೇ ತಿಂಗಳ ಒಳನೋಟದಲ್ಲಿ ಪ್ರಕಟವಾಗಿದ್ದ ನನ್ನ ಎರಡು ಪುಟಗಳ ಸಣ್ಣ ಬರಹಕ್ಕೆ ಶ್ರೀ ದತ್ತಾತ್ರೇಯ ಹೊಸಬಾಳೆ ಅವರ ದೀರ್ಘ ಪ್ರತಿಕ್ರಿಯೆ (ಎರಡನೆಯ ಪುಟ) ನೋಡಿದೆ.

ದತ್ತಾತ್ರೇಯ ತಮ್ಮ ಸಂಘಟನೆ ಕುರಿತು ಡಂಗುರ ಬಾರಿಸುವ ಉತ್ಸಾಹದ ಭರದಲ್ಲಿ ಪೂರ್ಣ ಸತ್ಯವನ್ನು ಹೊರಗೆಡೆಹುತ್ತೇನೆಂದು ಬರೆಯುತ್ತಾ ತಮ್ಮ ಬರವಣಿಗೆಯು ಖಚಿತವಾದುದೆಂದು ತೋರಿಸಲು ಕತ್ತಲ ಮೊರೆ ಹೊಕ್ಕಿದ್ದಾರೆ. ನಾನು ಸೆಲ್‌ಗೆ ಹೋಗಿದ್ದರ ಬಗ್ಗೆ ಬರೆದದ್ದು "ನನ್ನ ಕೀರ್ತಿ ಇತಿಹಾಸದ ಪುಟಗಳಲ್ಲಿ ಸೇರಲಿದೆ" ಎಂಬ ಸುವ್ವಲಾಲಿ ಹಾಡುವ ಅಗತ್ಯದಿಂದಲ್ಲ. ದತ್ತಾತ್ರೇಯ RSS ಜನ ಸಿಮೆಂಟ್ ಷೀಟ್ ಒಡೆದದ್ದನ್ನು ಬೇರೆಯವರು ಒಪ್ಪಿಕೊಳ್ಳಬೇಕೆಂದು ಬಯಸಿದ್ದರೇನೊ? ಅದಕ್ಕಾಗಿ ಒಡೆದದ್ದು ಮತ್ತು ಒಡೆದದ್ದನ್ನು ಒಪ್ಪಿಕೊಂಡಿದ್ದು RSS ಜನರೆಂದು ಸರ್ಟಿಫಿಕೇಟ್ ಕೊಟ್ಟಿದ್ದಾರೆ. ಇನ್ನು ನಿಜವಾಗಿ ಒಪ್ಪಿಕೊಂಡಿದ್ದು ನನ್ನ ನಂತರ ಷೀಟ್ ಒಡೆಯದಿದ್ದ ಸೊಗಡು ಶಿವಣ್ಣ, ಒಡೆದವರಾರೂ ಮುಂದೆ ಬಾರದಿದ್ದುದರಿಂದ, ನಾನೇ ಬೊಟ್ಟು ಮಾಡಿ ತೋರಿಸಿದ್ದರಿಂದ ಕೆ.ಟಿ. ಶಿವಣ್ಣ ನಂತರ ಅನಿವಾರ್ಯವಾಗಿ ಡಿ.ಜೆ. ಶಿವರಾಮ್ ಬಂದರು. ಆದರೆ ಷೀಟ್ ಒಡೆದ ಕೆ. ಬೋರಪ್ಪ ಮುಂತಾದ ಮಹಾನಾಯಕರು ಮಾತ್ರ (ಅವರೀಗ ತುಮಕೂರು ಜಿಲ್ಲೆಯ ಬಿಜೆಪಿ ಅಧ್ಯಕ್ಷ) ಶಿಸ್ತಿನಿಂದ ಸೂಚನೆಗಾಗಿ ಕಾಯುತ್ತಿದ್ದರೇನೊ. ಹೆಚ್.ಎಸ್. ವೆಂಕಟರಾಮಯ್ಯನವರು ಕನಲಿದ್ದು ಕನಸಿನಲ್ಲಿಯೇ ಇರಬೇಕು.

ನಮ್ಮ ಬ್ಯಾರಕ್ಕಿನಲ್ಲಿ ಬೀಡಿ ಸಿಗರೇಟ್ ಸೇದುವುದನ್ನು ಬ್ಯಾನ್ ಮಾಡಿದ್ದರು. ಜೆ.ಹೆಚ್. ಪಟೇಲರಿಗೆ ಮಾತ್ರ ವಿನಾಯಿತಿ. ಅವರಿಗೆ ಸೇದಬೇಡಿ ಎನ್ನುವ ಅಪ್ಪ ಯಾರಿಗೂ ಇರಲಿಲ್ಲ. ಚಟ, ಭಜನೆಗಳೊಡನೆ RSS ಸಂಬಂಧವಿರದಿದ್ದರೆ ಗೆಳೆಯರಾದ ಸಿಂಧ್ಯ, ಬಂದಗದ್ದೆ ರಮೇಶ್ ಮತ್ತು ಉಗ್ರಪ್ಪ ಉಪವಾಸ ಸತ್ಯಾಗ್ರಹ ಹೂಡುವ ಅಗತ್ಯವಿರಲಿಲ್ಲ.

ನಾನು ಗುಲ್ಬರ್ಗ ಜೈಲಿನಲ್ಲಿ ಭಜನೆಗೆ ಸೇರುತ್ತಿದ್ದುದು, ಸಂಗೀತದ ಗಂಧವಿರದಿದ್ದರೂ ಕೇಳುವ, ಕೇಳಿದ್ದನ್ನು ಗುಣುಗುಣಿಸುವ ಹವ್ಯಾಸದಿಂದಾಗಿ. ತುಮಕೂರಿನ

RSS ಮುಖ್ಯಸ್ಥರಾದ ಹೆಚ್.ಎಸ್. ವೆಂಕಟರಾಮಯ್ಯ "ಗೋಪಿ, ಭಜಗೋವಿಂದಂ ಹಾಡಯ್ಯ" (ಶೋಲೆ ಚಿತ್ರದ ಮೆಹಬೂಬಾ ಧಾಟಿಯಲ್ಲಿ) ಎನ್ನುತ್ತಿದ್ದುದು ಅದನ್ನು ಕೇಳಿ ಕೆಲವರು ಸಂಕಟ ಪಡುತ್ತಿದ್ದುದು ದತ್ತಾತ್ರೇಯರವರಿಗೂ ತಿಳಿದಿದೆ.

ದೇಶದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಜನಜೀವನಕ್ಕೆ ಸ್ಪಂದಿಸದ ಒಂದು ಫ್ಯಾಸಿಸ್ಟ್ ಸಂಘಟನೆ ಬಗ್ಗೆ ಅಧ್ಯಯನ ಅಕೆಡಮಿಕ್ ಆಗಬಹುದಷ್ಟೆ? ನಾನು ವೆಂಕಟರಾವ್‌ರವರನ್ನು ಖಂಡಿಸಿದ್ದರೆ ಅದು ಸಹ RSS ಕುರಿತಾಗಿಯೆ. ವೆಂಕಟ ರಾವ್ RSS ಪ್ರಭಾವವುಳ್ಳ ಜನತಾ ಪಕ್ಷವನ್ನು ತೊರೆಯಬೇಕೆಂದೂ, ನಾನು RSS ಅನ್ನೇ ಜನತಾ ಪಕ್ಷದಿಂದ ಹೊರದೂಡಬೇಕೆಂಬ ವಾದದಿಂದಾಗಿ. ಆದರೆ RSS ಅಂತಹ ಆರೋಗ್ಯಕರ ಟೀಕೆಯನ್ನು ಸಹಿಸುವುದಿಲ್ಲವಾದ್ದರಿಂದ ಅವರಿಗೆ ನಾನು ವೆಂಕಟ ರಾವ್‌ರವರನ್ನು ಟೀಕಿಸಿದ್ದು ನಂತರ ಅವರನ್ನು ಕುರಿತು ಬರೆದದ್ದು ವಿರೋಧಾಭಾಸ ವಾಗಿ ಕಂಡಿರಬೇಕು.

ದತ್ತಾತ್ರೇಯ ಯಾವುದೇ ಘಟನೆಯನ್ನು ಉಲ್ಲೇಖಿಸದೆ. "ವೆಂಕಟರಾವ್ ರೊಡನೆಯ ನನ್ನ ಅನುಭವಗಳೂ ಹಲವಿವೆ. ಅವರು ನಮ್ಮೊಂದಿಗೆ ಈಗ ಇಲ್ಲ, ಆದ್ದ ರಿಂದ ಅದನ್ನೆಲ್ಲಾ ಹೊರಹಾಕುವುದು ಉಚಿತವಲ್ಲ" ಎಂದಿರುವುದು RSS ಜನ ಸಾಮಾನ್ಯವಾಗಿ ಅನುಸರಿಸುವಂತಹ Black Mail ತಂತ್ರ ಮತ್ತು ಚಾರಿತ್ರ್ಯವಧೆಯ ಉದಾಹರಣೆಯಾಗಿದೆ.

ಮುಂದೆ ಎಂದಾದರೂ RSS ಸದಸ್ಯತ್ವ ಲಾಭಕರವಾಗಬಹುದೆಂಬ Prospective ದೃಷ್ಟಿಯಿಂದ RSS ನಲ್ಲಿಯೇ ಉಳಿದಿರುವ ದತ್ತಾತ್ರೇಯ, ಮಂಗಳ ಪಾಂಡೆ, ಏಳೂವರೆ ಎಸ್ಸೆಸ್ ಎಂದೆಲ್ಲಾ ಬರೆಯುವುದರ ಬಗ್ಗೆ ಪ್ರತಿಕ್ರಿಯೆ ಸೂಚಿಸ ಲಾರೆ. ಆದರೆ ಇಷ್ಟು ಮಾತ್ರ ಹೇಳಬಲ್ಲೆ. RSS ಜನ ಸರ್ವಪಕ್ಷ ನಾಯಕರು. ತಲೆ ಎಣಿಕೆಯ ಆಧಾರದ ಮೇಲೆ ತಮ್ಮ ಶಕ್ತಿಯ ತಮಟೆ ಬಾರಿಸುವ ಅವರಿಗೆ "ಎಲ್ಲಾರೂ—ನಮ್ಮವರೆ" ಬಹಿರಂಗವಾಗಿ ವಿರೋಧಿಸಿ ಬರೆಯುವವರೆಗೆ. ●

## ವೆಂಕಟಲಕ್ಷ್ಮಿಯವರ 'ಗಂಡು ಹೆಣ್ಣಿನ ಸಂಬಂಧ'

ಪ್ರಿಯ ಶೂದ್ರ,

ಜೂನ್ ಸಂಚಿಕೆಯ ವೆಂಕಟಲಕ್ಷ್ಮಿಯವರ ಲೇಖನ ತುಂಬ ಚೆನ್ನಾಗಿದೆ. ಈ ಹೆಣ್ಣುಮಗಳ ಧೈರ್ಯ, ಕಾಳಜಿ ಅಪೂರ್ವವಾದುವು. ಹೀಗೆ ನಮ್ಮಲ್ಲಿ ಯಾರು ಯೋಚಿ

ಸುತ್ತಾರೆ ? ಮಹಿಳಾ ವಿಮೋಚನೆಯ ಅಗತ್ಯತೆ, ಅನಿವಾರ್ಯತೆಯನ್ನು ಎತ್ತಿ ತೋರಿಸುತ್ತ ತಾನು ಕಂಡದ್ದೇ ಪ್ರಮಾಣ, ಕೇಳಿದ್ದೇ ಪುರಾವೆ ಎಂದು ಗಂಡು ಒರೆಯುವ ನಿಯತಿಗೆ ಇತಿಶ್ರೀ ಹಾಡಬಲ್ಲ ಇಂಥ ಲೇಖನಗಳು ಶೂದ್ರಕ್ಕೆ ನಿಜಕ್ಕೂ 'ವಜನ' ತರಬಲ್ಲವು. ಗಂಡಿಗೆ ಅನುಗಾಲ ಶರಣಾಗತಳಾಗಿದ್ದೂ 'ಫಾತಿಮಾ ಜೊಹರಾಳ'ನ್ನು ಅನುಕರಿಸುವಂತೆ ಮಾಡಲಾದ ಮುಸಲ್ಮಾನ ಹೆಣ್ಣು ಹೊದ್ದುಕೊಂಡ ಬುರುಕಿ, ಹೆಣ್ಣಿನ ಮೇಲಾಗುವ ಕ್ರೂರ ದಬ್ಬಾಳಿಕೆಗೆ ಜೀವಂತ ಸಾಕ್ಷಿಯಾದರೆ ಹಿಂದೂ ಹೆಣ್ಣು ಸಾಕ್ಷಾತ್ ದೇವತೆಯಾಗಿ ಆರಾಧಿಸಲ್ಪಟ್ಟರೂ ಆಕೆ ಬರಿ ಮಾಂಸದ ಮುದ್ದೆ ಅಲ್ಲ ಆಕೆಗೂ ಹೃದಯ ಮನಸ್ಸುಗಳಿವೆ ಎನ್ನುವುದನ್ನು ಪ್ರಜ್ಞಾಪೂರ್ವಕವಾಗಿ ಮರೆಯಲೆತ್ನಿಸುವ ಸಮಾಜ ಪಾಪ ಪ್ರಜ್ಞೆಗೆ ಮರ್ಮಭೇದಕ ಏಟು ಕೊಡಬಲ್ಲ ಇಂತಹ ಲೇಖಕರ ದನಿಯಲ್ಲಿ ಅಡಗಿದ್ದೇನು ? ಎಂಬುದನ್ನ ಮಹಿಳಾ ವಿಮೋಚನೆಯ ಬೊಬ್ಬೆಯ ಮಧ್ಯೆ ಕೂಲಂಕಷವಾಗಿ ಯೋಚಿಸುವುದು ಅನಿವಾರ್ಯವಾಗಿದೆ. ನೋವನ್ನ ನಲಿವಾಗಿ ನಲಿವನ್ನ ನೋವಾಗಿಯೇ ಅರ್ಥೈಸುತ್ತ ಬಂದಿರುವ ಪುರುಷ ಪ್ರಧಾನ ಸಮಾಜದಲ್ಲಿ ಗಂಡು ಹೆಣ್ಣಿನ ನಡುವಿನ ತೀರಾ ಮುಖ್ಯವಾದ ನೋವಿನ ಸಂಗತಿಗಳನ್ನು ಬಯಲಿಗೆಳೆದ ಬಿ.ಎಸ್. ವೆಂಕಟಲಕ್ಷ್ಮಿ ಈ ಲೇಖನಕ್ಕೆ "ಈ ಗಂಡು ಹೆಣ್ಣಿನ ನಡುವೆ ನಲಿದಾಡುವ ಸಂಗತಿಗಳು" ಎಂದು ಹೇಗೆ ತಲೆಬರಹ ಕೊಟ್ಟರು ?

—ಹಸನ್ ನಯೀಮ ಸುರಕೋಡ

**ಮುಂದಿನ ಸಂಚಿಕೆಯಲ್ಲಿ :**

ಚಿತ್ರಕಲೆ ಕೆಲವು ವಿಚಾರಗಳು ಮತ್ತು ವೆಂಕಟಪ್ಪನವರ ಬಗ್ಗೆ ಲೇಖನ.

ಕೆ.ವಿ. ತಿರುಮಲೇಶ್, ವೇಣುಗೋಪಾಲ ಸೊರಬ ಹುತ್ತು ವೀಚಿಯವರ ಕವನಗಳು.

ಬಿ.ಸಿ. ದೇಶಾಯಿವರ ಕತೆ, ಇತ್ಯಾದಿ........

# ಅಭಿವೃದ್ಧಿಯೆಡೆಗೆ ಸರ್ಕಾರದ ಮಹತ್ತರ ಹೆಜ್ಜೆ

* ರಾಜ್ಯದ 102 ತಾಲ್ಲೂಕುಗಳಲ್ಲಿ ಆಗಾಗ್ಗೆ ಉಂಟಾಗುವ ಅಭಾವ ಪರಿಸ್ಥಿತಿಯ ಶಾಶ್ವತ ನಿವಾರಣೆಗಾಗಿ ಕೇಂದ್ರಕ್ಕೆ 205 ಕೋಟಿ ರೂ. ಗಳ ಯೋಜನೆಯ ಸಲ್ಲಿಕೆ.

* ಇಪ್ಪತ್ತು ಅಂಶಗಳ ಕಾರ್ಯಕ್ರಮದ ಅನುಷ್ಠಾನಕ್ಕೆ ಅತ್ಯಂತ ಹೆಚ್ಚಿನ ಆದ್ಯತೆ, ಅದಕ್ಕಾಗಿ ತಾಲ್ಲೂಕು, ಜಿಲ್ಲೆ ಮತ್ತು ರಾಜ್ಯಮಟ್ಟದ ಸಮಿತಿ ಗಳ ರಚನೆ.

* ಸಾಮಾಜಿಕ ನ್ಯಾಯದಿಂದ ಕೂಡಿದ ಆರ್ಥಿಕ ಪ್ರಗತಿ ಸರ್ಕಾರದ ಗುರಿ.
* ಅಂಗವಿಕಲರಿಗಾಗಿ 10.50 ಲಕ್ಷ ರೂಪಾಯಿ ಅಂದಾಜು ವೆಚ್ಚದ ವಿಶೇಷ ಯೋಜನೆಗಳು.

* ಪ್ರೆಸ್ ಅಕಾಡೆಮಿ ಸ್ಥಾಪನೆಗೆ ನಿರ್ದಿಷ್ಟ ಕ್ರಮ.
* ಹಂಪೆಯ ಪ್ರಾಚೀನ ವೈಭವವನ್ನು ಮರಳಿ ತರಲು ವಿಶೇಷ ಯೋಜನೆ.
* ಮೈಸೂರಿನಲ್ಲಿ ವಿಶ್ವ ಕನ್ನಡಿಗರ ಸಮ್ಮೇಳನವನ್ನು ನಡೆಸಲು ನಿರ್ಧಾರ.
* ರಾಜ್ಯದಲ್ಲೇ ತಯಾರಾಗಿ, ಪ್ರದರ್ಶನವಾಗುವ ಎಲ್ಲಾ ಕನ್ನಡ ಚಿತ್ರ ಗಳಿಗೆ ಶೇಕಡಾ 50 ರಷ್ಟು ಮನರಂಜನಾ ತೆರಿಗೆ ವಿನಾಯಿತಿ.
* ಗ್ರಾಮ ಸಹಾಯಕರ ಮಾಸಿಕ ಸಂಭಾವನೆ 100 ರೂ. ಯಿಂದ 120ಕ್ಕೆ ಹೆಚ್ಚಳ.
* ವಿದ್ಯುತ್ ಯೋಜನೆಗಳಿಗಾಗಿ 117 ಕೋಟಿ ರೂ. ನೀಡಿಕೆ.
* 12 ಕೋಟಿ ರೂ. ವೆಚ್ಚದಲ್ಲಿ ಉದ್ಯೋಗ ದೃಢೀಕರಣ ಯೋಜನೆ.
* ಸಹಕಾರಿ ವಲಯದಲ್ಲಿ ಇನ್ನು ನಾಲ್ಕು ನೂಲಿನ ಗಿರಣಿಗಳ ಸ್ಥಾಪನೆ.

ಪ್ರಕಟಣೆ :

ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ

# ಅಂಗವಿಕರ ಶ್ರೇಯೋಭಿವೃದಿಗೆ.
# ಸರ್ಕಾರದ ನೆರವು

* ರಾಜ್ಯದಲ್ಲಿ ಶಿಕ್ಷಣ, ತರಬೇತಿ ಮತ್ತು ಪುನರ್ವಸತಿಯ ಹನ್ನೊಂದು ಕೇಂದ್ರಗಳು ಮತ್ತು ಮೂರು ಸ್ವಯಂಸೇವಾ ಸಂಸ್ಥೆಗಳು ಕಾರ್ಯನಿರತವಾಗಿವೆ.

* ಸ್ವಯಂ ಸೇವಾ ಸಂಸ್ಥೆಗಳ ಶಿಕ್ಷಕರ ಸಂಬಳದ ವೆಚ್ಚಕ್ಕಾಗಿ ಶೇಕಡಾ ಮೂರು ಭಾಗ ಮತ್ತು ಸಾದಿಲ್ವಾರು ಖರ್ಚಿಗಾಗಿ ಶೇಕಡಾ 50 ಭಾಗವನ್ನು ಸರ್ಕಾರವೇ ಭರಿಸುತ್ತದೆ.

* ಒಂದರಿಂದ ಐದನೆಯ ತರಗತಿಗಳಲ್ಲಿ ಕಲಿಯುವ ಮತ್ತು ವಿವಿಧ ಲಲಿತ ಕಲೆಗಳನ್ನು ಕಲಿಯುವ ಅಂಗವಿಕಲ ವಿದ್ಯಾರ್ಥಿಗಳಿಗೆ ತಿಂಗಳಿಗೆ 25 ರೂಪಾಯಿ ಮತ್ತು ಆರರಿಂದ ಎಂಟನೆಯ ತರಗತಿಯ ವಿದ್ಯಾರ್ಥಿಗಳಿಗೆ 35 ರೂಪಾಯಿ ವಿದ್ಯಾರ್ಥಿ ವೇತನ ನೀಡಲಾಗುತ್ತಿದೆ. ಆದರೆ ಅವರ ಪಾಲಕರ ವಾರ್ಷಿಕ ಆದಾಯ 10 ಸಾವಿರ ರೂಪಾಯಿಗೆ ಮೀರಿರಬಾರದು. ಕೇಂದ್ರ ಸರ್ಕಾರವೂ ಕೂಡ ಇವರಿಗೆ ವಿದ್ಯಾರ್ಥಿ ವೇತನಗಳನ್ನು ಕೊಡುತ್ತಿದೆ. ಸರ್ಕಾರವು. ಅಂಗವಿಕಲರು ತಮ್ಮ ಬದುಕಿಗೆ ನೆರವಾಗುವ ವಿಶೇಷ ಉಪಕರಣಗಳನ್ನು ಕೊಳ್ಳಲು ಹಣಕಾಸಿನ ನೆರವನ್ನು ನೀಡುತ್ತದೆ. ಅಂತಹವರ ಕುಟುಂಬದ ವಾರ್ಷಿಕ ಆದಾಯ 6 ಸಾವಿರ ರೂ. ಇದ್ದರೆ ಪೂರ್ತಿಹಣ, ಅದಕ್ಕೆ ಹೆಚ್ಚಿದ್ದವರಿಗೆ ಶೇಕಡಾ 75 ಭಾಗ ಹಣವನ್ನು ಕೊಡಲಾಗುವುದು.

* ದೈಹಿಕ ಮತ್ತು ಮನೋವಿಕಲ ವ್ಯಕ್ತಿಗಳ ಕುಟುಂಬದ ವಾರ್ಷಿಕ ಆದಾಯ 3,600 ರೂಪಾಯಿ ಅಥವಾ ಕಡಿಮೆಯಿದ್ದರೆ, ಅವರಿಗೆ ಮಾಸಿಕ 40 ರೂಪಾಯಿ ನಿರ್ವಹಣಾ ಭತ್ಯೆಯನ್ನು ನೀಡಲಾಗುವುದು.

* ಅಸ್ಥಿ ಊನ ಮತ್ತು ಕುರುಡು, ಸರ್ಕಾರೀ ನೌಕರರಿಗೆ ಗರಿಷ್ಠ ಮಾಸಿಕ 40 ರೂಪಾಯಿ ಸಾರಿಗೆ ಭತ್ಯೆಯನ್ನು ನೀಡಲಾಗುತ್ತಿದೆ. ಕುರುಡು ಉದ್ಯೋಗಿಗಳು ವೃತ್ತಿ ತೆರಿಗೆ ಕೊಡಬೇಕಾಗಿಲ್ಲ.

* ಕುರುಡರು ನಗರ ಪ್ರದೇಶಗಳಲ್ಲಿ ಸಂಚರಿಸುವ ಸರ್ಕಾರೀ ಸಾರಿಗೆ ಬಸ್‌ಗಳಲ್ಲಿ ಬಸ್ ಚಾರ್ಜ್ ಕೊಡಬೇಕಾಗಿಲ್ಲ. ನಗರದ ಹೊರಗಡೆ ಅವರು ಸರ್ಕಾರಿ ಬಸ್‌ಗಳಲ್ಲಿ ಸಂಚರಿಸಿದರೆ, ಶೇಕಡಾ 50 ಭಾಗ ರಿಯಾಯತಿ ದೊರೆಯುತ್ತದೆ.

* ಸರ್ಕಾರಿ ಉದ್ಯೋಗ ನೇಮಕಾತಿಗಳಲ್ಲಿ ಮೂರು ಮತ್ತು ನಾಲ್ಕನೆಯ ದರ್ಜೆಯ ನೇರ ನೇಮಕಾತಿಗಳಲ್ಲಿ ಅಂಗವಿಕಲರಿಗಾಗಿ ಶೇಕಡ 2 ಭಾಗವನ್ನು ಮೀಸಲಿಟ್ಟಿದೆ.

* ಪೌರಾಡಳಿತ ಮಾರುಕಟ್ಟೆಗಳ ಕೆಲವು ಅಂಗಡಿಗಳನ್ನು ಅಂಗವಿಕಲರಿಗಾಗಿ ಮೀಸಲಿಡಲಾಗುವುದು.

**ಪ್ರಕಟಣೆ : ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ**

# ಬಡವರಿಗೆಲ್ಲ ಮನೆ
# ರಾಜ್ಯ ಸರಕಾರದ ಬೃಹತ್ ಯೋಜನೆ

* ಬಡವರಿಗೆಲ್ಲ ಮನೆ, ಇಲ್ಲವೆ ನಿವೇಶನ ನೀಡಲು ಸರಕಾರ ವಿಸ್ತಾರ ಕಾರ್ಯಕ್ರಮ ಹಾಕಿಕೊಂಡಿದೆ. ಇದರಂತೆ ಬಡವರಿಗೆ ಜನತಾ ಮನೆಗಳನ್ನು ಕಟ್ಟಿಸಿಕೊಡುವುದು ಅಥವಾ ನಿವೇಶನಗಳನ್ನು ನೀಡುವ ಕಾರ್ಯ ಹಂತ ಹಂತವಾಗಿ ಮುಂದುವರಿಯುತ್ತಿದೆ.

* ಇದುವರೆಗೆ ರಾಜ್ಯದ ಗ್ರಾಮಾಂತರ ಪ್ರದೇಶದಲ್ಲಿ ಎಂಟು ಲಕ್ಷಕ್ಕೂ ಹೆಚ್ಚು ನಿರ್ಗತಿಕ ಕುಟುಂಬಗಳಿಗೆ ಮನೆ ನಿವೇಶನಗಳನ್ನು ಹಂಚಲಾಗಿದೆ. ಇವುಗಳ ಪೈಕಿ ಮೂರನೆಯ ಒಂದರಷ್ಟು ಹರಿಜನ-ಗಿರಿಜನ ಕುಟುಂಬಗಳು. ಮನೆ ಇಲ್ಲದ ಬಡವರಿಗಾಗಿ ಎಂಬತ್ತು ಸಾವಿರ ಮನೆಗಳನ್ನು ಕಟ್ಟಲು ಸರಕಾರ ಆರು ಕೋಟಿ ರೂಪಾಯಿಗಳನ್ನು ಖರ್ಚು ಮಾಡುತ್ತಿದೆ. ಈಗಾಗಲೇ 65 ಸಾವಿರಕ್ಕೂ ಹೆಚ್ಚು ಮನೆಗಳನ್ನು ಕಟ್ಟಲಾಗಿದೆ.

* ಆರನೆಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಒಂದು ನೂರು ಕೋಟಿ ರೂಪಾಯಿ ವೆಚ್ಚ ಮಾಡಿ, ಐದು ಲಕ್ಷ ಮನೆಗಳನ್ನು ಕಟ್ಟಲು ತೀರ್ಮಾನಿಸಲಾಗಿದೆ. ಜನತಾ ಮನೆಗಳ ನಿರ್ಮಾಣಕ್ಕಾಗಿ ಹುಡ್ಕೊದಿಂದ ಹತ್ತು ಕೋಟಿ ರೂಪಾಯಿಗಳನ್ನು ಪಡೆಯಲಾಗುತ್ತಿದೆ. ತೀರ ನಿರ್ಗತಿಕರಿಗೆ ನಿಲ್ಲಲ್ಲು ನೆಲೆಯಾಗಿ ಗುಡಿಸಲು ನಿರ್ಮಿಸುವ ಯೋಜನೆಯನ್ನು ಸರಕಾರ ಕೈಗೊಂಡಿದೆ.

* ಜನತಾ ಗೃಹ ನಿರ್ಮಾಣ ಯೋಜನೆಯಡಿಯಲ್ಲಿ ಇದುವರೆಗೆ ರಾಜ್ಯದಲ್ಲಿ ಕಟ್ಟಲಾಗಿರುವ ಮನೆಗಳ ಸಂಖ್ಯೆ 1,77,78. ಈ ವರ್ಷದ ಮಾರ್ಚ್ ವರೆಗೆ ಈ ಕಾರ್ಯಕ್ಕಾಗಿ ಮಾಡಲಾಗಿರುವ ವೆಚ್ಚ ಸುಮಾರು 39, 75, 73, 450 ರೂಪಾಯಿ. ಗುಡಿಸಲು ನಿರ್ಮಾಣ ಯೋಜನೆಯಂತ ಕಟ್ಟಿರುವ ಸಂಖ್ಯೆ 40450.

ಪ್ರಕಟಣೆ :
**ವಾರ್ತಾ ಮತ್ತು ಪ್ರಚಾರ ಇಲಾಖೆ,**
**ಕರ್ನಾಟಕ ಸರಕಾರ, ಬೆಂಗಳೂರು.**

L/NP/KRNU/72 No: M (2) PRB 211/73-7



ಹವಾ ನಿಯಂತ್ರಣದ ಬದುಕು. ಕಲೆ : ಆರ್. ಎಂ. ಹಡಪದ್

**ಶೂದ್ರಕ್ಕೆ ಚಂದಾ ಕಳಿಸಲು ಮಡಿವಂತರಾಗಬೇಡಿ**
**ನಿಮ್ಮಿಂದ ಶೂದ್ರ ಬೆಳೆಯಬೇಕಾಗಿದೆ.**

Printed at : SHALIVAHAN PRINTERS, Bangalore-53
Editor & Publisher : M. SRINIVAS